# PACKAGE TOURS 2017

**Hotel Room Accom. & South Indian Veg. Food**

## Shaktipeetha Manali Special : 18 Days

**Aug 28**

Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Charodham Yatra : 19 Days

**June 04 Aug 28 Sep 16, 25 Oct 02**

Haridwar, Kempty Falls, Yamunotri, Uttarkashi, Ganganani, Gangotri, Kedarnath, Triyugi (optional), Maana, Badrinath, Rishikesh, New Delhi

*Avail Rs. *20,000/- subsidy*

## Kashi Nepal : 16 Days

**Sep 06**

Kashi, Kathmandu, Patan, Pokhara, Manokamana, Jomsom, Mukthinath, Gorakhpur

## Thirth Yatra : 14 Days

**Oct 02**

Kashi, Chitrakoota, Allahabad, Naimisharanya, Ayodhya, Saranath, Gaya, Bodhgaya

## Kolkata Darjeeling : 16 Days

**Oct 04**

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling, Tiger Hills

## Darjeeling Bhutan : 16 Days

**Oct 18**

Siliguri, Gangtok, Chengu Lake, Harbhajan Singh Mandir, Darjeeling, Tiger Hills, Jaigaon, Punstoling, Thimpu, Paro

## HOLY KAILASH & MANASA SAROVAR YATRA

*Avail Rs. *30,000/- subsidy*

June 21, Aug 28, Sep 09







# Shri Hansaa Travels


Recognised by Department of Tourism, Govt. of Karnataka

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612



# ವಿವೇಕಪ್ರಭ

ಜೂನ್-2017

ಸಂಪುಟ 18 ಸಂಚಿಕೆ 06



## ವಿಶೇಷ ಲೇಖನ



## ಧಾರಾವಾಹಿ













ವ್ಯವಸ್ಥಾಪಕ ಸಂಪಾದಕರು

*ಸ್ವಾಮಿ ಆತ್ಮಜ್ಞಾನಂದ*

ಸಂಪಾದಕರು

*ಸ್ವಾಮಿ ಜ್ಞಾನಯೋಗಾನಂದ*

ನೆರವು:

*ಆರ್. ಎಸ್. ಪೂರ್ಣಾನಂದ*

*ಡಾ. ಕೆ. ಎಲ್. ಪ್ರಸನ್ನಾಕ್ಷೀ*

*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

ಮುದ್ರಣ

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

ಮುಖಪುಟ:

ಮಳೆಗಾಗಿ ಇಳೆ ಕಾದಿದೆ..

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

E-mail: mysuru.vivekaprabha@rkmm.org

Website: www.vivekaprabha.net

ಫೋನ್ : 9481533505

ಚಂದಾ ವಿವರ

ಬಿಡಿ ಪ್ರತಿ : ₹ 14

ವಾರ್ಷಿಕ : ₹ 140

ಮೂರು ವರ್ಷ : ₹ 375

ಆಜೀವ (25 ವರ್ಷ) : ₹ 3,000

ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)

ವಾರ್ಷಿಕ : $ 20; ಮೂರು ವರ್ಷ : $ 60

ಆಜೀವ (25ವರ್ಷ) : $ 300

ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಪ್ರಾರ್ಥನೆ

# ಆದಿತ್ಯ ಹೃದಯದಿಂದ



**ರಶ್ಮಿಮಂತಂ ಸಮುದ್ಯಂತಂ ದೇವಾಸುರನಮಸ್ಕೃತಮ್ ।**
**ಪೂಜಯಸ್ವ ವಿವಸ್ವಂತಂ ಭಾಸ್ಕರಂ ಭುವನೇಶ್ವರಮ್ ॥ ೧ ॥**

ದೇವಾಸುರರಿಂದ ನಮಸ್ಕರಿಸಲ್ಪಡುವ, ರಶ್ಮಿಗಳಿಂದ ಕೂಡಿದ, ತನ್ನ ಪ್ರಭೆಯಿಂದ ಬೆಳಗುವ ಬೇರೆ ವಸ್ತುಗಳನ್ನು ಕಳೆಗುಂದಿಸುವ, ಜಗತ್ತಿಗೆ ಒಡೆಯನಾದ, ಉದಯಿಸುತ್ತಿರುವ ಭಾಸ್ಕರನನ್ನು ಪೂಜಿಸು.

**ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ ।**
**ಮಹೇಂದ್ರೋ ಧನದಃ ಕಾಲೋ ಯಮಃ ಸೋಮೋ ಹ್ಯಪಾಂಪತಿಃ ॥ ೨ ॥**

ಅವನೇ ಬ್ರಹ್ಮಾ, ವಿಷ್ಣು, ಶಿವ, ದೇವಸೇನಾಪತಿ ಸ್ಕಂದ, ಪ್ರಜಾಪತಿ ಮತ್ತು ಮಹೇಂದ್ರ. ಕುಬೇರನೂ ಅವನೇ. ಅವನೇ ಕಾಲ ಮತ್ತು ಯಮ. ಸೋಮ ಮತ್ತು ವರುಣರೂ ಅವನೇ.

**ಆದಿತ್ಯಃ ಸವಿತಾ ಸೂರ್ಯಃ ಖಗಃ ಪೂಷಾ ಗಭಸ್ತಿಮಾನ್ ।**
**ಸುವರ್ಣಸದೃಶೋ ಭಾನುರ್ಹಿರಣ್ಯರೇತಾ ದಿವಾಕರಃ ॥ ೩ ॥**

ಅವನೇ ಅದಿತಿಪುತ್ರ, ವಿಶ್ವಕರ್ತಾ, ಕ್ರಿಯೋತ್ತೇಜಕ, ಆಕಾಶದಲ್ಲಿ ಚಲಿಸುವವನು, ಪೋಷಕನು, ಎಲ್ಲ ದಿಕ್ಕುಗಳನ್ನು ಬೆಳಗುವವನು, ಸ್ವರ್ಣಮಯ ಪ್ರಭೆಯುಳ್ಳವನು, ವಿಶ್ವೋತ್ಪತ್ತಿಯ ಬೀಜ ಮತ್ತು ಹಗಲನ್ನು ಉಂಟುಮಾಡುವವನು.

**ಹಿರಣ್ಯಗರ್ಭಃ ಶಿಶಿರಸ್ತಪನೋ ಭಾಸ್ಕರೋ ರವಿಃ ।**
**ಅಗ್ನಿಗರ್ಭೋಽದಿತೇಃ ಪುತ್ರಃ ಶಂಖಃ ಶಿಶಿರನಾಶನಃ ॥ ೪ ॥**

ಅವನೇ ಹಿರಣ್ಯಗರ್ಭನು, ಶೀತಲನೂ ತಪಿಸುವವನೂ ಅವನೇ, ಉಜ್ವಲ ಕಿರಣಗಳುಳ್ಳ ರವಿಯೂ ಅವನೇ. ಒಳಗೆ ಅಗ್ನಿಯನ್ನು ಧರಿಸಿದ ಅದಿತಿಯ ಪುತ್ರನು ಅವನು. ಅನಂತ ಶುಭದಾಯಕನೂ ಜಡತೆಯನ್ನು ನಾಶ ಮಾಡುವವನೂ ಅವನು.

**ನಕ್ಷತ್ರಗ್ರಹತಾರಾಣಾಮಧಿಪೋ ವಿಶ್ವಭಾವನಃ ।**
**ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನ್ನಮೋಽಸ್ತು ತೇ ॥ ೫ ॥**

ನಕ್ಷತ್ರ ಗ್ರಹ ತಾರಾಗಣಗಳಿಗೆ ಅವನು ಅಧಿಪನು ಮತ್ತು ವಿಶ್ವದಲ್ಲಿರುವುದಕ್ಕೆಲ್ಲ ಮೂಲಪುರುಷನು. ಎಲ್ಲ ತೇಜಸ್ಸುಗಳಿಗೂ ಅವನೇ ಮೂಲ ತೇಜಸ್ಸು. ದ್ವಾದಶರೂಪದಲ್ಲಿ ಆವಿರ್ಭವಿಸಿರುವ ನಿನಗೆ ನಮಸ್ಕಾರ.

**ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾಮಿತಾತ್ಮನೇ ।**
**ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ ॥೬॥**

ತಮೋನಾಶಕನಿಗೂ, ಹಿಮನಾಶಕನಿಗೂ, ಶತ್ರುನಾಶಕನಿಗೂ, ಅನಂತಾತ್ಮನಿಗೂ, ಕೃತಘ್ನರನ್ನು ನಾಶಮಾಡುವವನಿಗೂ, ದೇವನಿಗೂ ಮತ್ತು ಜ್ಯೋತಿಗಳ ಒಡೆಯನಿಗೂ ನಮಸ್ಕಾರ.

# ಗ್ರೀಕ್ ಸೂಕ್ತಿಗಳು



ಬಹುಪಾಲು ಮಂದಿ ಸ್ತ್ರೀಪುರುಷರಿಗೆ ಜನ್ಮತಃ ಅಥವಾ ಸಹಜವಾಗಿ ಸಂಪತ್ತು ಅಥವಾ ಅಧಿಕಾರವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅಗತ್ಯವಾದ ಸಾಮರ್ಥ್ಯ ಇರುವುದಿಲ್ಲ. ಆದರೆ ಅವರಿಗೆಲ್ಲ ಜ್ಞಾನವನ್ನು ವರ್ಧಿಸಿಕೊಳ್ಳುವ ಸಾಮರ್ಥ್ಯ ಇದ್ದೇ ಇರುತ್ತದೆ.

**–ಪೈಥಗೋರಸ್**



ತನ್ನ ಬಳಿ ಇರುವುದರಲ್ಲಿ ತೃಪ್ತಿಯನ್ನು ಕಂಡುಕೊಳ್ಳದವನಿಗೆ, ತಾನೇನು ಪಡೆಯಬೇಕೆಂದು ಬಯಸುವನೋ ಅದರಲ್ಲೂ ತೃಪ್ತಿ ಸಿಗಲಾರದು.

**–ಸಾಕ್ರಟೀಸ್**



ನಮ್ಮಲ್ಲಿ ಈಗಾಗಲೇ ಇರುವ ಜ್ಞಾನ ಭಂಡಾರವೆಲ್ಲ ನಮಗೆ ಗೊತ್ತಿಲ್ಲದ ಜ್ಞಾನಕ್ಕೆ ಹೋಲಿಸಿದರೆ ಅತ್ಯಂತ ಅಲ್ಪ.

**–ಪ್ಲೇಟೋ**



ಹೃದಯಕ್ಕೆ ಶಿಕ್ಷಣ ನೀಡದೆ ಕೇವಲ ಮೆದುಳಿಗೆ ಶಿಕ್ಷಣ ನೀಡುವ ವಿದ್ಯಾಭ್ಯಾಸವು ವಿದ್ಯಾಭ್ಯಾಸವೇ ಅಲ್ಲ.



**–ಅರಿಸ್ಟಾಟಲ್**



ಸಣ್ಣ ಮನಸ್ಸಿನವರು ಇತರರನ್ನು ಆರೋಪಿಸುತ್ತಾರೆ. ಮಧ್ಯಮ ದರ್ಜೆಯ ಮನಸ್ಸಿನವರು ತಾವೇ ಆರೋಪ ಹೊತ್ತುಕೊಳ್ಳುತ್ತಾರೆ. ಬುದ್ಧಿವಂತರು ಮಾತ್ರ ಎಲ್ಲ ಆರೋಪವೂ ಹೆಡ್ಡತನವೆಂದೇ ತಿಳಿಯುತ್ತಾರೆ.

**–ಎಪಿಕ್ಟಟಸ್**






# ಶ್ರೀರಾಮಕೃಷ್ಣ ಮಠ

ರಿಸರ್ವ್ ಲೈನ್, ನ್ಯೂ ನಾಥಂ ರಸ್ತೆ ,
ಮದುರೈ – 625 014 ತಮಿಳುನಾಡು
ಫೋನ್: 0452–2680224
ಇಮೇಲ್ : madurai@rkmm.org


## ಮನವಿ

ಆತ್ಮೀಯ ಬಾಂಧವರೆ,

ಇದು '**ಶ್ರೀರಾಮಕೃಷ್ಣ ಶಾರದಾ ವಿದ್ಯಾಲಯ**'ದ ಆವರಣದಲ್ಲಿ ಭಗವತ್ಕೃಪೆಯಿಂದ ನಿರ್ಮಾಣ ಹೊಂದಲಿರುವ ಒಂದು ಹೊಸ ಕಟ್ಟಡಕ್ಕಾಗಿ ನಿಧಿಸಂಗ್ರಹ ಮಾಡುವ ಉದ್ದೇಶದಿಂದ ಮಾಡಿರುವ ಬಿನ್ನಹವಾಗಿದೆ. ಇದಕ್ಕಾಗಿ ಭಗವಂತನಲ್ಲಿ ಪ್ರಾರ್ಥನೆ ಮಾಡುತ್ತ, ನಮ್ಮ ಸುತ್ತಮುತ್ತ ನಾವು ಸಲ್ಲಿಸುತ್ತಿರುವ ಸೇವಾಕಾರ್ಯಗಳನ್ನು ಕುರಿತು ಇಲ್ಲಿ ಕೆಲವು ಮಾಹಿತಿಗಳನ್ನು ನೀಡಬಯಸುತ್ತೇವೆ:

೧. ಪ್ರತಿದಿನ ಬೆಳಗ್ಗೆ ನಾವು ಮಠದ ಆವರಣದಲ್ಲಿ 120 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಆಹಾರವನ್ನು ಒದಗಿಸುತ್ತಿದ್ದೇವೆ.

೨. ಮಠದ ಆವರಣದಲ್ಲಿರುವ ಅಲೋಪತಿ ಹಾಗೂ ಹೋಮಿಯೋಪಥಿ ಚಿಕಿತ್ಸಾಲಯಗಳ ಮೂಲಕ ನಾವು ಬಡ ಹಾಗೂ ಅನಾರೋಗ್ಯದಿಂದಿರುವ ಜನರಿಗೆ ಉಚಿತ ಆರೋಗ್ಯ ಸೌಕರ್ಯವನ್ನು ನೀಡುತ್ತಿದ್ದೇವೆ.

೩. ಉಚಿತ ವೈದ್ಯಕೀಯ ಶಿಬಿರಗಳು:

i) ಉಚಿತ ನೇತ್ರಪರೀಕ್ಷೆ ಶಿಬಿರ – ಪ್ರತಿ ತಿಂಗಳ ಮೂರನೆಯ ಭಾನುವಾರ
ii) ಉಚಿತ ಆಕ್ಯುಪಂಕ್ಚರ್ ಶಿಬಿರ – ಪ್ರತಿ ತಿಂಗಳ ಮೂರನೆಯ ಭಾನುವಾರ
iii) ಉಚಿತ ಸಾಮಾನ್ಯ ವೈದ್ಯಕೀಯ ಶಿಬಿರ – ಕೆಲವು ತಿಂಗಳಿಗೆ ಒಂದು ಬಾರಿ

**ಶಾರದಾ ವಿದ್ಯಾಲಯ ಶಾಲೆ:** ಶ್ರೀರಾಮಕೃಷ್ಣ ಮಠವು ನಡೆಸುತ್ತಿರುವ '**ಶ್ರೀ ಶಾರದಾ ವಿದ್ಯಾಲಯ**' ದಲ್ಲಿ **545** (ಗಂಡು ಮಕ್ಕಳು ಹಾಗೂ ಹೆಣ್ಣುಮಕ್ಕಳು) ನರ್ಸರಿ ಹಾಗೂ ಪ್ರಾಥಮಿಕ ದರ್ಜೆಯಲ್ಲಿ ಓದುತ್ತಿದ್ದಾರೆ.

**ಉಚಿತ ತರಬೇತಿ ಕೇಂದ್ರ:** '**ಶಾರದಾ ವಿದ್ಯಾಲಯ**'ದ ಆವರಣದಲ್ಲಿ ಪ್ರತಿದಿನ ಸಾಯಂಕಾಲ ನಾವು ನರ್ಸರಿ ಶಾಲೆಯಲ್ಲಿ ಓದುತ್ತಿರುವ ಹಾಗೂ ಎಲ್ಲ ಹಂತದ ಮಕ್ಕಳಿಗೆ ಉಚಿತ ತರಬೇತಿಯ ತರಗತಿಗಳನ್ನು ನಡೆಸುತ್ತಿದ್ದೇವೆ.

ಸುಮಾರು ೫ ಲಕ್ಷ ರೂ.ಗಳಷ್ಟು ಮೊತ್ತವನ್ನು ಬಡವಿದ್ಯಾರ್ಥಿಗಳ ಉನ್ನತ ಶಿಕ್ಷಣ ವ್ಯಾಸಂಗಕ್ಕಾಗಿ ಸ್ಕಾಲರ್‌ಶಿಪ್‌ಗೋಸ್ಕರ ವಿನಿಯೋಗಿಸ ಲಾಗುವುದು ಎಂದು ನಾವು ತಿಳಿಸಲು ಹರ್ಷಿಸುತ್ತೇವೆ.

### ನಮ್ಮ ಸೇವಾಕಾರ್ಯಕ್ಕಾಗಿ ಹೊಸ ಭವನದ ಆವಶ್ಯಕತೆ

**ನೆಲ ಅಂತಸ್ತು:** ಪ್ರಧಾನ ಆವಶ್ಯಕತೆ ನೆಲ ಅಂತಸ್ತಿನಲ್ಲಿ; ಸಾಯಂಕಾಲ ಎಲ್ಲ ಹಂತಗಳ ವಿದ್ಯಾರ್ಥಿಗಳಿಗೆ ಹಾಗೂ ಬೆಳಿಗ್ಗೆ ಪ್ರಾಥಮಿಕ ತರಗತಿಯ ವಿದ್ಯಾರ್ಥಿಗಳಿಗೆ ಇದು ಸ್ಥಳಾವಕಾಶವನ್ನು ಕಲ್ಪಿಸಿಕೊಡುವುದು. ಉಚಿತ ವೈದ್ಯಕೀಯ ಶಿಬಿರಗಳಿಗೂ ಇದು ಅವಶ್ಯವಾಗಿದೆ. ಆದಕಾರಣ, ನಾವು ೨೫೦೦ ಚದರಡಿಯ ವಿಸ್ತೀರ್ಣವುಳ್ಳ ಬಹೂಪಯೋಗಿ ಕಟ್ಟಡವನ್ನು ನಿರ್ಮಿಸಲು ಯೋಜನೆಯನ್ನು ತಯಾರಿಸಿದ್ದೇವೆ. ಈ ಕಟ್ಟಡದ ನಿರ್ಮಾಣಕ್ಕಾಗಿ ೫೫ ಲಕ್ಷ ರೂ.ಗಳ ವೆಚ್ಚ ತಗಲುವುದಾಗಿ ಅಂದಾಜು ಮಾಡಲಾಗಿದೆ. ಇದು ಭಕ್ತಬಾಂಧವರ ಹಾಗೂ ಹಿತೈಷಿಗಳ ಉದಾರ ಧನಸಹಾಯದಿಂದಾಗಿ ಮಾತ್ರವೇ ನಡೆಯಬಹುದಾಗಿದೆ.

#### ದೇಣಿಗೆಗೆ ಮನವಿ

ಈ ಯೋಜನೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ನಿಮ್ಮ ಉದಾರ ಹಾಗೂ ದಯಾಪೂರ್ಣವಾದ ನೆರವಿನಲ್ಲಿ ನಮಗೆ ನಂಬುಗೆಯಿದೆ. ಈ ಶೈಕ್ಷಣಿಕ ಸೇವಾಕಾರ್ಯಕ್ಕೆ ನೀವು ಸಲ್ಲಿಸುವ ದಾನ, ದತ್ತಿಗಳು ನಾವು ನಡೆಸುತ್ತಿರುವ ಬಡಜನರ ಕಲ್ಯಾಣದ ಈ ಪಯಣವನ್ನು ಮುಂದುವರಿಸಲು ನೆರವಾಗುವುದು. ಎಲ್ಲ ದಾನ, ದತ್ತಿ, ಕಾಣಿಕೆಗಳು ಅವೆಷ್ಟೇ ಸಣ್ಣದಿರಲಿ, ಕೃತಜ್ಞತಾಪೂರ್ವಕವಾಗಿ ಅವುಗಳನ್ನು ಸ್ಮರಿಸಲಾಗುವುದು. ತಮಗೆ ಒಪ್ಪಿಗೆಯಿದ್ದಲ್ಲಿ, ಒಂದು ಲಕ್ಷ ರೂ. ಹಾಗೂ ಹೆಚ್ಚಿನ ಮೊತ್ತವನ್ನು ದೇಣಿಗೆಯಾಗಿ ನೀಡುವ ದಾನಿಗಳ ಹೆಸರನ್ನು ಹೊಸ ಕಟ್ಟಡದಲ್ಲಿ ಅಮೃತಶಿಲೆಯ ಫಲಕಗಳಲ್ಲಿ ಹಾಕಿಸಲಾಗುವುದು.

ದೇಣಿಗೆಗಳನ್ನು ಚೆಕ್, ಡಿಡಿ ಮೂಲಕ '**Ramakrishna Math, Madurai**' ಎಂಬ ಹೆಸರಿನಲ್ಲಿ ತೆಗೆದು, ನಮ್ಮ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕು: Ramakrishna Math, Reserve Lines, New Natham Road, Madurai, Tamil Nadu 625014 Phone: 0452-268 0224 ದೇಣಿಗೆಗಳಿಗೆ ಆದಾಯ ತೆರಿಗೆ ಕಾಯಿದೆಯ 80G ಸೆಕ್ಷನ್ ಅನ್ವಯ ಆದಾಯ ತೆರಿಗೆ ವಿನಾಯಿತಿ ಲಭ್ಯವಿದೆ.

ನಿಮ್ಮೆಲ್ಲರಿಗಾಗಿ ಮದುರೈ ಶ್ರೀ ಮೀನಾಕ್ಷಿದೇವಿ, ಶ್ರೀ ಸುಂದರೇಶ್ವರ ಹಾಗೂ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ ಹಾಗೂ ಸ್ವಾಮಿ ವಿವೇಕಾನಂದರಿಗೆ ಪ್ರಾರ್ಥನೆಗಳನ್ನು ಸಲ್ಲಿಸುತ್ತೇನೆ. ಮತ್ತೊಮ್ಮೆ ತಮಗೆಲ್ಲರಿಗೂ ನನ್ನ ಪ್ರೀತಿಯ ನಮಸ್ಕಾರಗಳು ಹಾಗೂ ಶುಭಾಶಯಗಳು.

*ಇತಿ ಭಗವತ್ಸೇವೆಯಲ್ಲಿ ತಮ್ಮ,*
**ಸ್ವಾಮಿ ಕಮಲಾತ್ಮಾನಂದ**
ಅಧ್ಯಕ್ಷರು



ಭಗವಂತನು ಸಾಕಾರನೂ ಹೌದು, ನಿರಾಕಾರನೂ ಹೌದು. ಮತ್ತೆ ಆತ ಸಾಕಾರ ನಿರಾಕಾರಗಳಿಗೆ ಅತೀತನೂ ಹೌದು. ಆತ ಇದೇ ಅಂತ ಹೇಳಲಾಗುವುದಿಲ್ಲ.

–ಶ್ರೀರಾಮಕೃಷ್ಣರು



ಮೃತ್ಯು ಯಾವಾಗಲೂ ಅನಿಶ್ಚಿತವಾಗಿರುವುದರಿಂದ, ಅವಕಾಶ ಬಂದಾಗಲೆಲ್ಲ ಪುಣ್ಯಕಾರ್ಯಗಳನ್ನು ಮಾಡುತ್ತಾ ಹೋಗು. ಸೂಕ್ತ ಸಮಯಕ್ಕಾಗಿ ಕಾಯುತ್ತಿರಬೇಡ. ಮೃತ್ಯು ಕಾಲಾಕಾಲ ವಿವೇಚನೆ ಮಾಡುವುದಿಲ್ಲ.

– ಶ್ರೀಶಾರದಾದೇವಿ



ಯಾವ ಸಮಾಜದಲ್ಲಿ ಶ್ರೇಷ್ಠತಮ ಸತ್ಯಗಳು ಅನುಷ್ಠಾನ ಸಾಧ್ಯವಾಗುವುದೋ ಅದೇ ಶ್ರೇಷ್ಠ ಸಮಾಜ. ಸಮಾಜದಲ್ಲಿ ಶ್ರೇಷ್ಠ ಸತ್ಯವನ್ನು ತರಲು ಸಾಧ್ಯವಿಲ್ಲದೆ ಇದ್ದರೆ ಅದು ಸಾಧ್ಯವಾಗುವಂತೆ ಮಾಡಿ. ಅದನ್ನು ಎಷ್ಟು ಬೇಗ ಮಾಡಿದರೆ ಅಷ್ಟು ಒಳ್ಳೆಯದು. ಈ ರೀತಿ ಸ್ತ್ರೀಪುರುಷರು ಒಂದು ಆದರ್ಶಕ್ಕೆ ನಿಲ್ಲಬೇಕು. ಸತ್ಯವನ್ನು ನಿರ್ಭಯವಾಗಿ ನಂಬಿ; ನಿರ್ಭಯವಾಗಿ ಅನುಷ್ಠಾನಕ್ಕೆ ತನ್ನಿ.

– ಸ್ವಾಮಿ ವಿವೇಕಾನಂದ

ಸಂಪಾದಕೀಯ

# ಬೆಳಕ ಬೀರುವ ಹಾದಿ

## ಭಾಗ ೧

**ಸ್ಥಾಪಕಾಯ ಚ ಧರ್ಮಸ್ಯ ಸರ್ವಧರ್ಮಸ್ವರೂಪಿಣೇ।**
**ಅವತಾರ ವರಿಷ್ಠಾಯ ರಾಮಕೃಷ್ಣಾಯ ತೇ ನಮಃ ॥**

(ಧರ್ಮಸಂಸ್ಥಾಪಕನೂ, ಸರ್ವಧರ್ಮಸ್ವರೂಪಿಯೂ, ಅವತಾರ ಶ್ರೇಷ್ಠನೂ ಆದ ಶ್ರೀರಾಮಕೃಷ್ಣರಿಗೆ ನಮಸ್ಕಾರ.)

ಸ್ವಾಮಿ ವಿವೇಕಾನಂದರು ರಚಿಸಿದ ಈ ಸ್ತೋತ್ರವು ಸಮಸ್ತ ಮನುಕುಲದ ವಿಕಾಸವನ್ನೂ, ಧಾರ್ಮಿಕ ಭಾವನೆಗಳ ಉಗಮವನ್ನೂ, ಅವತಾರ ತತ್ತ್ವದ ಮಹಿಮೆಯನ್ನೂ ಅಸಾಧಾರಣವಾಗಿ ಸೂಚಿಸುತ್ತದೆ. ಮೇಲ್ನೋಟಕ್ಕೆ ಧರ್ಮಸಮನ್ವಯವನ್ನು ಹೊಗಳುವ ಸ್ತೋತ್ರವಾಗಿ ಇದು ಕಂಡುಬರುತ್ತದೆ; ಆದರೆ ಅದರ ಆಳದಲ್ಲಿ ವಿಶಾಲವಾದ ಅರ್ಥಪರಂಪರೆಯಿದೆ. ಶ್ರೀರಾಮಕೃಷ್ಣರ ವ್ಯಕ್ತಿತ್ವದ ಅಗಾಧವೂ ಅಗಮ್ಯವೂ ಆದ ಅಗೋಚರ ನೆಲೆಯ ಒಂದು ಇಣುಕು ನೋಟ, ಒಂದು ಮಿಂಚಿನಂತೆ ಇಲ್ಲಿ ಗೋಚರವಾಗುತ್ತದೆ.

### ಧರ್ಮದ ಉದಯ

ಪ್ರಪಂಚದ ಧರ್ಮಗಳನ್ನೆಲ್ಲ ಚಾರಿತ್ರಿಕವಾಗಿ ಅಧ್ಯಯನ ಮಾಡುವಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಕಾಲದ ದೃಷ್ಟಿಯಿಂದ ಅವುಗಳ ಪ್ರಾಚೀನತೆಯನ್ನು ಅಳೆಯುವುದು ಅತ್ಯಂತ ಕಠಿಣವಾದ ಕಾರ್ಯ. ಇತಿಹಾಸದಲ್ಲಿ ಪ್ರಾಚೀನ ನಾಗರಿಕತೆಗಳು, ಅದಕ್ಕೂ ಹಿಂದಿನ ಮಾನವನ ವಿಕಾಸದ ಹಂತಗಳು, ಆದಿಮ ಜನಾಂಗದ ಅವಧಿ – ಹೀಗೆ ಹಿಂದುಹಿಂದಕ್ಕೆ ಹೋದಂತೆ ಕೇವಲ ಪಳೆಯುಳಿಕೆಗಳ, ಅವಶೇಷಗಳ ಆಧಾರವಷ್ಟೇ ಇತಿಹಾಸ ರಚನೆಯ ಸಾಮಗ್ರಿಯಾಗಿ ಉಳಿಯುತ್ತದೆ. ಮಾನವಶಾಸ್ತ್ರ (Anthropology) ಎಂಬ ವಿಜ್ಞಾನವು ಮೊದಲ ಮಾನವನಿಂದ ಹಿಡಿದು ನಾಗರಿಕತೆಯ ಉದಯದವರೆಗೆ ವಿವಿಧ ಹಂತಗಳಲ್ಲಿ ಮಾನವ ವಿಕಾಸ ಹೇಗೆ ನಡೆಯಿತು ಎಂದೆಲ್ಲ ಅಧ್ಯಯನ ಮಾಡುತ್ತದೆ. ಆದರೆ ಈ ಅವಶೇಷ, ಪಳೆಯುಳಿಕೆಗಳ ನಡುವೆ ಧರ್ಮದ ಉಗಮವೆಲ್ಲಿ ಕಂಡುಬರುತ್ತದೆ? ಬಹುಶಃ, ಧಾರ್ಮಿಕ ಭಾವನೆಗಳ ಸ್ಪಷ್ಟ ಚಿಹ್ನೆಗಳು ಕಂಡುಬರುವುದು ಈಜಿಪ್ಟ್, ಮೆಸೊಪೊಟಾಮಿಯ, ಸಿಂಧೂನದೀ ನಾಗರಿಕತೆಗಳಲ್ಲಿ. ಇದಕ್ಕೂ ಹಿಂದೆ ಧಾರ್ಮಿಕ ಭಾವನೆಗಳಿದ್ದವು; ಅವುಗಳು ಎಷ್ಟೋ ಸಾವಿರ ವರ್ಷಗಳಿಂದ ಬೆಳೆದುಕೊಂಡು ಬಂದಿದ್ದಿರಬೇಕು. ಇಲ್ಲದಿದ್ದರೆ, ಪುರಾತನ ನಾಗರಿಕತೆಗಳಲ್ಲಿ ಅವು ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವುದು ಸಾಧ್ಯವಿರುತ್ತಿರಲಿಲ್ಲ. ಐತಿಹಾಸಿಕ ದಾಖಲೆಗಳಲ್ಲಿ ಎರಡನೇ ದರ್ಜೆಯದೆಂದು ಪರಿಗಣಿಸಲಾಗಿರುವ ಸಾಹಿತ್ಯಿಕ ಆಧಾರಗಳನ್ನು ಗಮನಿಸಿದರೆ, ಋಗ್ವೇದವು ಎಲ್ಲಕ್ಕಿಂತಲೂ ಪ್ರಾಚೀನವಾದ ಸಾಹಿತ್ಯಿಕ ಕೃತಿಯಾಗಿ ಕಂಡುಬರುತ್ತದೆ. ಅಷ್ಟೇ ಅಲ್ಲ; ಅದು ಪ್ರಪಂಚದ ಅತಿಪ್ರಾಚೀನ ಧಾರ್ಮಿಕ-ಆಧ್ಯಾತ್ಮಿಕ ಕೃತಿಯೂ ಆಗಿದೆ. ಹಲವುಗೊಂದಲ, ವಾದ-ವಿವಾದಗಳಿಗೆ ಈಡಾಗಿರುವ ಋಗ್ವೇದದ ಕಾಲವಿಚಾರ ಇಂದಿಗೂ ಸ್ಪಷ್ಟವಾಗಿ ನಿಗದಿತವಾಗಿಲ್ಲ. ಅದರ ಪ್ರಾಚೀನತೆಯು ಅನೇಕ ಸಾವಿರ ವರ್ಷಗಳ ಅಂತರದಲ್ಲೇ ಇನ್ನೂ ತೂಗಾಡುತ್ತಿದೆ. ಆದರೆ, ಎಲ್ಲ ನಾಗರಿಕತೆಗಳಿಗಿಂತಲೂ ಎಷ್ಟೋ ಸಾವಿರ ವರ್ಷಗಳ ಹಿಂದೆಯೇ ಋಗ್ವೇದದ ರಚನೆಯ ಕಾಲವೆಂಬುದು ನಿರ್ವಿವಾದ. ಆದ್ದರಿಂದ, ಮಾನವನ ಮೊದಲ ಧಾರ್ಮಿಕ ಭಾವನೆಗಳನ್ನು ಋಗ್ವೇದದಲ್ಲೇ ಕಾಣಬೇಕಾಗಿದೆ.

ಋಗ್ವೇದದ ರಚನೆಯೂ ಬಹಳ ವಿಸ್ತಾರವಾದದ್ದು. ಅವುಗಳನ್ನು ರಚಿಸಿದವರು ಪ್ರಾಚೀನ ಋಷಿಗಳು; ಋಗ್ವೇದದ ರಚನೆಗಳಿಗೆ ಋಕ್ (ಅಥವಾ ಋಕ್ಕುಗಳು) ಎನ್ನುತ್ತಾರೆ. ಶ್ಲೋಕಗಳ, ಗದ್ಯರಚನೆಗಳ ರೂಪದ ಈ ಋಕ್ಕುಗಳನ್ನು ಸಾಮಾನ್ಯವಾಗಿ ಮಂತ್ರಗಳು ಎನ್ನುತ್ತಾರೆ. ಆಳವಾದ ಮನನ, ಧ್ಯಾನ, ತಪಸ್ಸುಗಳಿಂದ ಋಷಿಗಳು ತಮ್ಮ ಚಿತ್ತದಲ್ಲಿ ಮೂಡಿಬಂದ ಭಾವನೆಗಳನ್ನು ಮಾತಿನ ಮೂಲಕ ಪ್ರಕಟಪಡಿಸಿದರು. ಈ ಮಾತುಗಳೇ ಮಂತ್ರಗಳಾದವು. ಹೀಗೆ ಮೂಡಿಬಂದ, ಹತ್ತಾರು ಮಂತ್ರಗಳ ಒಂದು ಗುಂಪನ್ನು 'ಸೂಕ್ತ'ವೆನ್ನುತ್ತಾರೆ. ಸಾಮಾನ್ಯವಾಗಿ ಒಂದೊಂದು

ದೇವತೆಯನ್ನು ಕುರಿತ, ಸ್ತುತಿರೂಪದ ಈ ಸೂಕ್ತಗಳ ಒಟ್ಟು ಸಂಕಲನವೇ ಋಗ್ವೇದ. ಒಟ್ಟು ವೇದ ಸಾಹಿತ್ಯವನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದವೆಂದು ವಿಂಗಡಿಸುತ್ತಾರೆ. ಇವುಗಳಲ್ಲಿ ಋಗ್ವೇದವೇ ಅತ್ಯಂತ ಪ್ರಾಚೀನ ಹಾಗೂ ಪ್ರಧಾನವೆನ್ನಲಾಗಿದೆ.

ಋಗ್ವೇದದ ಕೆಲವು ಭಾಗಗಳನ್ನು ಹೆಚ್ಚು ಪ್ರಾಚೀನವೆಂದೂ, ಕೆಲವು ಭಾಗಗಳು–ವಿಶೇಷವಾಗಿ ತತ್ತ್ವ ಜ್ಞಾನಗಳೇ ಪ್ರಧಾನವಾಗಿರುವ ಉಪನಿಷತ್ತಿನ ಹಾಗೂ ಇತರ ಭಾಗಗಳು – ಇತ್ತೀಚಿನವು ಎಂದೂ ಅನೇಕ ಮಂದಿ ಪಾಶ್ಚಾತ್ಯ, ಆಧುನಿಕ ವಿದ್ವಾಂಸರುಗಳ ಅಭಿಪ್ರಾಯ. ಅದೇರೀತಿ, ಋಗ್ವೇದದ ಸಂಸ್ಕೃತ ಭಾಷೆಯ ರೂಪದಲ್ಲಿ ವೈವಿಧ್ಯತೆಯಿರುವುದರಿಂದ, ಭಾಷೆಯ ರಚನೆಯ ಆಧಾರದಿಂದಲೂ ಪ್ರಾಚೀನ, ಅನಂತರದ್ದು ಎಂದು ನಿಗದಿಗೊಳಿಸಿದ್ದೂ ಇದೆ. ವಿಷಯವನ್ನು ಆಧರಿಸಿ ಮಾಡಿದ ವಿಂಗಡನೆಗಿಂತ, ಭಾಷೆಯನ್ನು ಆಧರಿಸಿ ಮಾಡಿದ, ವಿಂಗಡನೆ ಹೆಚ್ಚಿನ ವೈಜ್ಞಾನಿಕವೇನೋ ನಿಜ. ಇಷ್ಟಾದರೂ ಒಂದು ಅಂಶ ಮುಖ್ಯವಾಗುತ್ತದೆ. ಯಾವುದೇ ಖಚಿತ ಆಧಾರಗಳಿಲ್ಲದೆ ಮಾಡಿದ ಈ ವಿಂಗಡನೆ 'ಚಾರಿತ್ರಿಕ' ಅಧ್ಯಯನ ಹೇಗಾದೀತು? ಧಾರ್ಮಿಕ, ಆಧ್ಯಾತ್ಮಿಕ ಮೂಲಗ್ರಂಥವೊಂದನ್ನು ಐತಿಹಾಸಿಕ ಅಳತೆಗೋಲಿನಿಂದ ನೋಡುವುದು ಎಷ್ಟರಮಟ್ಟಿಗೆ ಸಮಂಜಸವಾದೀತು? ಯಾವ ತತ್ತ್ವಗಳನ್ನು ವೇದಗಳು ಸಾರುತ್ತವೋ, ಅವುಗಳ ಪ್ರಕಾರ ವೇದ ಅನಾದಿ, ಸನಾತನ ಹಾಗೂ ನಿತ್ಯ (ಎಂದೆಂದಿಗೂ ಇರುವಂತಹುದು). 'ವೇದ'ವೆಂದರೆ ಭಾಷೆ, ಪದ, ಶ್ಲೋಕಗಳು ಎಂದರ್ಥವಲ್ಲ; ವೇದವೆಂದರೆ ಜ್ಞಾನ, ತತ್ತ್ವ. ಆ ತತ್ತ್ವವೆಂದರೆ ಲೌಕಿಕ ಜ್ಞಾನವನ್ನು ಮೀರಿದ, ವಿಶಿಷ್ಟ ಆಧ್ಯಾತ್ಮಿಕ ಅನುಭವದಿಂದ ಗಳಿಸಿದ ಜ್ಞಾನ. ಅದು ವ್ಯಕ್ತಗೊಂಡ ಸ್ವರೂಪವೇ ಶಬ್ದರೂಪದ ವೇದ. ಈ ದೃಷ್ಟಿಯಿಂದ ನೋಡಿದಾಗ ಪಾಶ್ಚಾತ್ಯ, ಆಧುನಿಕ ವಿದ್ವಾಂಸರ ವಾದಗಳನ್ನೆಲ್ಲ ನಿರಾಕರಿಸಬೇಕಾಗುತ್ತದೆ. ವೇದಗಳನ್ನು ಲೌಕಿಕ ದೃಷ್ಟಿಯಿಂದ ಅರ್ಥೈಸಬಾರದು; ಅವುಗಳನ್ನು ಆಧ್ಯಾತ್ಮಿಕ ಸಾಧನೆ, ಅನುಭವಗಳ ಮೂಲಕವೇ ಅರಿತುಕೊಳ್ಳಬೇಕು ಎಂಬ ಸ್ವಾಮಿ ವಿವೇಕಾನಂದರ ಮಾತು ಇಲ್ಲಿ ಮುಖ್ಯವಾಗುತ್ತದೆ.

### ಉಳಿದ ಧರ್ಮಗಳಲ್ಲಿ

ಜಗತ್ತಿನ ಹಲವು ಧರ್ಮಗಳಲ್ಲಿ ಅವುಗಳ ಸಂಸ್ಥಾಪಕನಾದ ಮಹಾಪುರುಷನೊಬ್ಬನಿರುತ್ತಾನೆ. ಸಾಮಾನ್ಯವಾಗಿ ಅವನನ್ನು ಅವತಾರ, ಪ್ರವಾದಿ ಎಂದು ಕರೆಯುವುದಿದೆ. ಅವನು ದೇವರ ಸಂದೇಶವಾಹಕನೋ, ದೇವದೂತನೋ, ಅವನ ಪ್ರತಿನಿಧಿಯೋ ಆಗಿರುತ್ತಾನೆ. ಕ್ರಿಸ್ತ, ಮಹಮ್ಮದ್, ಮೋಸೆಸ್, ಝುರತುಷ್ಟ್ರ ಇವರೆಲ್ಲ ಹೀಗೆಯೇ ಒಂದೊಂದು ಧರ್ಮವನ್ನು ಸ್ಥಾಪಿಸಿದರು. ಪೂರ್ವ ಗೋಳಾರ್ಧದಲ್ಲಿ ಬುದ್ಧ, ಮಹಾವೀರ, ಕನ್ಫ್ಯೂಶಿಯಸ್ ಮೊದಲಾದವರು ಬಂದರು. ಇವರೆಲ್ಲ ವೇದಕಾಲದ ಋಷಿಗಳಂತೆ, ಅವ್ಯಕ್ತವೂ ಅಗೋಚರವೂ ಆದ ತತ್ತ್ವವೊಂದನ್ನು ಕಂಡುಕೊಂಡವರು; ತಮ್ಮ ಅನುಭವವನ್ನು ಇತರರ ಮುಂದೆ ಅವರ ಭಾಷೆಯಲ್ಲೇ ಸಾರಿದರು. ಒಬ್ಬ ದೇವೀಪುರುಷ, ಅವನ ಉಪದೇಶ, ಅವನ ಅನುಯಾಯಿಗಳು – ಇವು ಒಂದು ಧರ್ಮವನ್ನು ರೂಪಿಸುತ್ತವೆ. ಆದರೆ ಹಿಂದೂಧರ್ಮದಲ್ಲಿ ಈ ಸಾಮಾನ್ಯ ನಿಯಮ ಅನ್ವಯವಾಗದೆ, ಇಲ್ಲಿ ಹಲವು ಮಂದಿ ಮಹಾಪುರುಷರು, ಅವತಾರಪುರುಷರು, ಋಷಿಮುನಿಗಳು ಬರುತ್ತಾರೆ. ಇದಕ್ಕನುಗುಣವಾಗಿ ಧಾರ್ಮಿಕ ಗ್ರಂಥವೂ ಒಂದೇ ಆಗಿರದೆ, ವೇದಗಳು, ಗೀತೆ, ಸ್ಮೃತಿ, ಪುರಾಣೇತಿಹಾಸಗಳೆಲ್ಲವೂ ಧಾರ್ಮಿಕ ಗ್ರಂಥಗಳಾಗುತ್ತವೆ. ಈ ಆಧಾರದಲ್ಲಿ ಹಿಂದೂಧರ್ಮವನ್ನು ಅನುಭವಪ್ರಧಾನವಾದ, ಆಧ್ಯಾತ್ಮಿಕ ವೈವಿಧ್ಯತೆಗಳಿಂದ ಸಮೃದ್ಧವಾದ ಒಂದು ವಿಶಾಲ ಧರ್ಮವೆನ್ನಬೇಕು. ಇದನ್ನು ಸ್ವಾಮೀಜಿ 'ಹಲವು ಧರ್ಮಗಳ ತಾಯಿ' ಎಂದು ಕರೆದರು.

### 'ಧರ್ಮ' ಎಂದರೇನು?

'ಧಾರಯತಿ ಇತಿ ಧರ್ಮಃ' (ಯಾವುದು ಧರಿಸುವಂತೆ ಮಾಡುತ್ತದೋ ಅದು ಧರ್ಮ') ಜೀವನದಲ್ಲಿ ನಾವು ಕಂಡುಕೊಳ್ಳಬೇಕಾದ, ಧರಿಸಿಕೊಳ್ಳಬೇಕಾದ, ಅನುಸರಿಸಬೇಕಾದ ಮಾರ್ಗವನ್ನೇ 'ಧರ್ಮ'ವೆನ್ನಬೇಕು. ಅದು ಉನ್ನತವಾದ, ಶ್ರೇಷ್ಠವಾದ, ದೈವಿಕವಾದ, ಹಾಗೂ ಶಾಂತಿ–ಆನಂದ–ನೆಮ್ಮದಿಗಳ ಕಡೆಗೆ ನಮ್ಮನ್ನು ಕರೆದೊಯ್ಯುವ ಭವ್ಯ ದಾರಿ. ಅದೇ ಬೆಳಕು ನೀಡುವ ಹಾದಿ. ಧರ್ಮವೆಂಬುದು ಇಲ್ಲದಿದ್ದರೆ ನಮ್ಮ ಜೀವನ ಚೆನ್ನಾಗಿ ನಡೆಯುತ್ತಿರಲಿಲ್ಲವೆ? – ಎಂದು ಪ್ರಶ್ನಿಸುವವರಿದ್ದಾರೆ. ಎಲ್ಲೆಲ್ಲಿ ನೋಡಿದರೂ ಧರ್ಮದ ಹೆಸರಿನಲ್ಲಿ ಅನಾಚಾರ, ಬೂಟಾಟಿಕೆ, ಮೋಸ, ಕಲಹ, ಹಿಂಸಾಚಾರಗಳು ನಡೆಯುತ್ತಿವೆ; ಧರ್ಮವೇ ಕಾರಣವಾಗಿದ್ದುಕೊಂಡು ಅನೇಕ ಯುದ್ಧಗಳೂ ನಡೆದಿವೆ. ಪರಸ್ಪರ ದ್ವೇಷ, ಹಿಂಸೆ, ಬರ್ಬರ ಕೊಲೆಗಳಿಗೆ, ಕಾರಣವಾದ ಧರ್ಮಗಳು ಇರುವುದರಿಂದ ಉಪಯೋಗವೇನೇ ಇರಲಿ, ಅವುಗಳಿಂದ ಹಾನಿಯೇ ಹೆಚ್ಚು– ಎಂಬುದು ಅವರ ವಾದ. ಹಲವು ಮಂದಿ ನಾಸ್ತಿಕರ, ವೈಜ್ಞಾನಿಕ ದೃಷ್ಟಿಯ ಆಧುನಿಕರ ಹಾಗೂ ವಿಚಾರವಾದಿಗಳ ಅಭಿಪ್ರಾಯವೂ ಇದೇ ಆಗಿದೆ. ಮೇಲ್ನೋಟಕ್ಕೆ ಇದು ಅತ್ಯಂತ ವಾಸ್ತವ ಸಂಗತಿಯಾಗಿ ಕಂಡು ಬರುತ್ತದೆ. ಆದರೆ ಇದು ಅಷ್ಟೊಂದು ಸರಳವಾಗಿ ಪರಿಹರಿಸಲ್ಪಡುವ ಸಮಸ್ಯೆಯಲ್ಲದ್ದರಿಂದಲೇ ಪ್ರಪಂಚದಲ್ಲಿ ಆಳವಾಗಿ ಬೇರುಬಿಟ್ಟಿದೆ.

ಧರ್ಮವೆಂಬುದು ಕೇವಲ ಮಾನವ ನಿರ್ಮಿತವೆಂಬ ಭಾವನೆ ಹಲವರದು. ಆದರೆ, ಅದು ಈ ಪ್ರಪಂಚವನ್ನು ಮೀರಿದ, ಅಲೌಕಿಕವಾದ, ಆಧ್ಯಾತ್ಮಿಕಮೂಲದಿಂದ ಹುಟ್ಟಿಬಂದ ಜೀವನಕ್ರಮ ಎಂಬ ವಿವರಣೆ ಹೆಚ್ಚು ಸೂಕ್ತವೆನಿಸುತ್ತದೆ. ಇದಕ್ಕೆ ಬಲವಾದ ಕಾರಣವೂ ಇದೆ. ಒಬ್ಬ ಪ್ರವಾದಿ, ಒಬ್ಬ ಅವತಾರಪುರುಷ ಅಥವಾ ಒಂದು ದೇವಪುರುಷ ಒಂದು ಧರ್ಮವನ್ನು ಸ್ಥಾಪಸಿದನೆಂದರೆ ಅದು ಅವನ ಅಲೌಕಿಕ ಅನುಭವದಿಂದ ಪ್ರೇರಿತವಾಯಿತೆಂಬುದೇ ಮುಖ್ಯವಾಗುತ್ತದೆ. ಧರ್ಮದ ಉಗಮ ಅಲೌಕಿಕ

ದಲ್ಲಿ, ಅದರ ಗುರಿಯೂ ಅಲೌಕಿಕ ಅನುಭವ. ಈ ಪ್ರಪಂಚವನ್ನು ಹಾಗೂ ಇಂದ್ರಿಯಗ್ರಹಿಕೆಯನ್ನು ಮೀರಿದ ಅನುಭವ, ಆಧ್ಯಾತ್ಮಿಕ ಜ್ಞಾನವೇ ಇವುಗಳಿಗೆಲ್ಲ ಆಧಾರ. ಈ ಕಾರಣದಿಂದಲೇ ಇವು ಪ್ರಪಂಚದಲ್ಲಿ ಇನ್ನೂ ಉಳಿದಿವೆ. ಮಾನವನ ಮನಸ್ಸು ಶಾಶ್ವತ ಸುಖ, ಆನಂದ, ಶಾಂತಿ, ಹಾಗೂ ಜ್ಞಾನಗಳನ್ನು ಹಾತೊರೆಯುವ ವರೆಗೂ ಧಾರ್ಮಿಕ ಭಾವನೆಗಳು ಪ್ರಪಂಚದಲ್ಲಿ ನೆಲೆಸಿರುತ್ತವೆ. ಅಲೌಕಿಕ, ಆಧ್ಯಾತ್ಮಿಕ ಅನುಭೂತಿಯಲ್ಲಿ ಮಾನವನಿಗೆ ನಂಬಿಕೆ, ಶ್ರದ್ಧೆ, ಎಷ್ಟು ಶಕ್ತಿಶಾಲಿಯಾಗಿ ಉಳಿಯುವುದು ಎಂಬುದಷ್ಟೇ ಇಲ್ಲಿ ಮುಖ್ಯವಾಗುತ್ತದೆ.

### ಮಣ್ಣಿಂದ ದೂರವೆ ?

ಹಲವು ವಿಚಾರಧಾರೆಗಳಲ್ಲಿ ಇತ್ತೀಚೆಗೆ ಕೇಳಿ ಬರುತ್ತಿರುವ ಒಂದು ವಾದವೇ 'ಮಣ್ಣಿನ ಗುಣ', 'ನೆಲಕ್ಕೆ ಹತ್ತಿರ', 'ಜೀವಂತಿಕೆ' ಮೊದಲಾದ ಮಾತುಗಳಿಂದ ಸೂಚಿಸಲ್ಪಡುವ ವಾಸ್ತವತಾವಾದ. ಲೌಕಿಕ ಬದುಕು, ಪ್ರಪಂಚ, ಮಾನವಜೀವನ – ಇವೇ ಮುಖ್ಯ; ಕಣ್ಣಿಗೆ ಕಾಣದ, ಅಲೌಕಿಕವಾದ, ದೂರವೇ ಉಳಿಯುವ ಆದರ್ಶಗಳು ನಮಗೆ ಬೇಕಾಗಿಲ್ಲ ಎಂಬುದು ಈ ವಾದಗಳ ಮರ್ಮ. ಮೇಲ್ನೋಟಕ್ಕೆ ಪ್ರಾಮಾಣಿಕವೆಂಬಂತೆ ಕಾಣಿಸುವ ಈ ವಾದಗಳ ಹಿಂದೆ ಧಾರ್ಮಿಕ ಭಾವನೆಗಳನ್ನು ವಿರೋಧಿಸುವ ನಾಸ್ತಿಕ ವಿಚಾರಧಾರೆಗಳ ಪ್ರೇರಣೆಯಿದೆ. ಧರ್ಮ, ಆಧ್ಯಾತ್ಮಿಕತೆಗೆ, ಅದು ವೈಯಕ್ತಿಕ ಸ್ವಾತಂತ್ರ್ಯವೆಂಬ ಪರಿಧಿಯಲ್ಲಿ ಮಾತ್ರ ಈ ವಾದಗಳು ಅವಕಾಶ ಕೊಡುತ್ತವೆ. ನಿಜ, ಧರ್ಮ ವೈಯಕ್ತಿಕ; ಆದರೆ ಸಮಾಜದಿಂದ ವ್ಯಕ್ತಿ ಹೇಗೆ ಪ್ರತ್ಯೇಕ ಉಳಿಯುವನು? ಸಮಾಜ, ಸಂಸ್ಕೃತಿ, ಜನಜೀವನದ ಅವಿಭಾಜ್ಯ ಅಂಗವಾಗಿರುವ ಧರ್ಮ–ಆಧ್ಯಾತ್ಮಿಕತೆಗಳು ವೈಯಕ್ತಿಕವೂ ಹೌದು, ಸಾಮಾಜಿಕವೂ ಹೌದು. ಅಲೌಕಿಕ ಅನುಭವದ ದೃಷ್ಟಿಯಲ್ಲಿ ಆಧ್ಯಾತ್ಮಿಕತೆ ವೈಯಕ್ತಿಕವಾದರೆ, 'ಧರ್ಮ'ವು ಸಮಾಜ–ಸಂಸ್ಕೃತಿಗಳ ಅಂಗವಾಗಿದ್ದು ಲೌಕಿಕ–ಅಲೌಕಿಕಗಳ ಕೊಂಡಿಯಾಗಿದೆ; ಅದು ಒಟ್ಟು ಸಮಾಜವನ್ನೇ ಮುನ್ನಡೆಸುತ್ತದೆ. ಆಧ್ಯಾತ್ಮಿಕ ಅನುಭೂತಿ ವೈಯಕ್ತಿಕವಾಗಿದ್ದ ಮಾತ್ರಕ್ಕೆ ಅದೇನೂ ಅವಾಸ್ತವವಾಗಬೇಕೆಂದಿಲ್ಲ. ವಾಸ್ತವತೆಯ ಅಳತೆಗೋಲು ವೈಜ್ಞಾನಿಕ ಜಗತ್ತಿನಲ್ಲಿ ಬೇರೆ. ವಿಜ್ಞಾನ, ಅಧ್ಯಾತ್ಮ ಇವೆರಡಕ್ಕೂ ಒಂದೇ ಅಳತೆಗೋಲನ್ನು ಉಪಯೋಗಿಸಿದಾಗಲೇ ಗೊಂದಲವುಂಟಾಗುವುದು. ಧರ್ಮ, ಅಧ್ಯಾತ್ಮಗಳನ್ನು ಅದರದೇ ಅಳತೆಗೋಲಿನಿಂದ ಅಳೆದರೆ, ಅದೂ ಅತ್ಯಂತ ವಾಸ್ತವ, ಮಣ್ಣಿಗೆ ಅತ್ಯಂತ ಹತ್ತಿರ, ಎಲ್ಲಕ್ಕಿಂತ ಹೆಚ್ಚು ಜೀವಂತ.

### ಧರ್ಮಗಳ ಹಾದಿ

ಜನರ ಬದುಕಿನಲ್ಲಿ ಬೆಳಕಾಗಿ ಬಂದ ಧರ್ಮಗಳು ಹಲವರ ಜೀವನದಲ್ಲೂ ಹೊಸ ಆಶಯಗಳನ್ನು ತುಂಬಿದವು. ಹಲವು ಬಾರಿ ಪ್ರಪಂಚದ ನೋವು–ನಲಿವುಗಳಿಂದ ಬಳಲಿ ಬೆಂಡಾದ ಜೀವ ಶಾಂತಿ, ಸಾಂತ್ವನ, ಭರವಸೆಯನ್ನರಸಿ ಹೋಗುವುದು. ಅಂಥವರ ಬದುಕಿಗೆ ಮಹಾತ್ಮರ ಉಪದೇಶಗಳಲ್ಲಿನ ಭಕ್ತಿ–ಜ್ಞಾನ–ತ್ಯಾಗ–ವೈರಾಗ್ಯಗಳ ಆದರ್ಶ ತಂಪನ್ನೆರೆಯುವುದು. ತಮಗೆ ದೊರೆತ ಈ ಆಸರೆಯನ್ನೇ ಬಾಳ ಉಸಿರನ್ನಾಗಿಸಿ, ಬದುಕನ್ನು ಸಾರ್ಥಕಗೊಳಿಸಿಕೊಂಡ ಜೀವಗಳು ಅನೇಕ. ಇದರರ್ಥ ಕೇವಲ ಜೀವನದ ಕಾಠಿಣ್ಯ, ಸಂಕಟ, ದುಃಖಗಳಿಂದ ಮಾತ್ರವೇ ಜನರು ಧಾರ್ಮಿಕರಾಗುವರು, ಅವರಿಗೆ ಮಾತ್ರ ಧರ್ಮದ ಆವಶ್ಯಕತೆ ಎಂದಲ್ಲ. ಜೀವನದಲ್ಲಿ ನೋವುನಲಿವು, ಸುಖದುಃಖ, ಬಡತನ ಸಿರಿತನ, ಹುಟ್ಟುಸಾವುಗಳು ಜೊತೆಜೊತೆಗೇ ಬರುತ್ತವೆ; ಒಂದನ್ನೊಂದು ಬಿಡಲಾರವು. ಆದರೆ ಮಾನವನು ಬಯಸುವುದು ಕೇವಲ ಸುಖವನ್ನು, ಅವನಿಗೆ ದುಃಖ ಬೇಡ. ಇದು ಹೇಗಾದೀತು? ದುಃಖ, ಮರಣ, ನೋವು, ಸಂಕಟವೆಂದರೆ ಎಲ್ಲರೂ ಮೂಗು ಮುರಿಯುತ್ತಾರೆ. ಹಾಗೆಂದು ಅವುಗಳನ್ನು ಸಂಪೂರ್ಣ ತೊಲಗಿಸಲಾಗುವುದೆ? ಸುಖ, ಆನಂದಗಳ ಕಡೆಗೆ ಎಷ್ಟು ವಾಲುತ್ತೇವೋ ಅದಕ್ಕಿಂತ ಹೆಚ್ಚು ದುಃಖ, ಸಂಕಟಗಳು ಬೆನ್ನಟ್ಟಿ ಬರುವುವು. ಇವುಗಳನ್ನು ಸುಲಭವಾಗಿ ಬಗೆಹರಿಸಲಾರೆವು. ಧರ್ಮ ಹೇಳುತ್ತದೆ – ಇದೇ ವಾಸ್ತವ. ಈ ದ್ವಂದ್ವಗಳನ್ನು ನೀನು ತೊಲಗಿಸಲಾಗದು. ಬದಲಾಗಿ ಅವುಗಳನ್ನು ಮೀರಿ ಹೋಗಬಹುದು. ಬುದ್ಧ ಹೇಳಿದ, ''ಆಸೆಯನ್ನೇ ಬಿಟ್ಟುಬಿಡು; ಆಗ ಸುಖ, ದುಃಖ ಎರಡೂ ಬರಲಾರವು. ನಿನಗೆ ಚಿರಶಾಂತಿ, ಆನಂದ ಲಭಿಸುವುದು.'' ಗೀತೆ ಹೇಳುತ್ತದೆ, ''ಸುಖ ದುಃಖಗಳೆರಡನ್ನೂ ಸಮಾನವಾಗಿ ಸ್ವೀಕರಿಸು. ಸೋಲು, ಗೆಲುವು, ಎರಡನ್ನು ಒಂದೇ ರೀತಿ ಭಾವಿಸು. ಆಗಲೇ ನೀನು ಜೀವನದಲ್ಲಿ ನಿಜವಾಗಿ ಗೆಲ್ಲುವೆ.'' ಧರ್ಮವೆಂಬುದು ಈ ಪ್ರಪಂಚದಿಂದ ವಿಮುಖವಾದುದಲ್ಲ; ಅಲೌಕಿಕ ಜಗತ್ತಿಗೆ ಈ ಪ್ರಪಂಚವನ್ನು ಜೋಡಿಸುವ ಸೇತುವೆ. ಪ್ರಪಂಚವನ್ನು ಮೇಲೆತ್ತುವ, ಲೌಕಿಕ ಜೀವನದ ದಾರುಣ ಹಾಗೂ ಕಠೋರ ಅನುಭವಗಳಿಂದ ನಮ್ಮನ್ನು ಉನ್ನತ ನೆಲೆಗೆ ಕರೆದೊಯ್ಯುವ ದಿವ್ಯ ಮಾರ್ಗವೇ ಧರ್ಮ. ಮಹಾತ್ಮರ, ಋಷಿ ಮುನಿಗಳ, ಪ್ರವಾದಿಗಳ, ಅವತಾರಪುರುಷರ ಅನುಭವದ ನುಡಿಗಳೇ ಈ ದಿವ್ಯ ಮಾರ್ಗದಲ್ಲಿ ಎದುರಾಗುವ ಬೆಳಕಿನ ಕಿರಣಗಳು. ಈ ನುಡಿಗಳನ್ನು ಬರೆದಿಟ್ಟಾಗ, ಅವೇ ಧರ್ಮಗ್ರಂಥಗಳಾದವು. ಮಹಾತ್ಮರ ಸರಳ ನುಡಿಗಳನ್ನು ಸರಳವಾಗಿಯೇ ಅರ್ಥೈಸಿಕೊಳ್ಳಬೇಕು. ಆಗ ಅವು ನಮ್ಮ ಬದುಕಿಗೆ ದಾರಿದೀಪವಾಗುವುವು. ಅದಕ್ಕೆ ಬದಲಾಗಿ, ನಾನಾ ಬಗೆಯ ಲೌಕಿಕ, ರಾಜಕೀಯ, ಮತೀಯ ಹಿತಾಸಕ್ತಿಗಳಿಗೆ ತಕ್ಕಂತೆ ಮಹಾತ್ಮರ ನುಡಿಗಳನ್ನು ಅಥವಾ ಧರ್ಮಗ್ರಂಥಗಳನ್ನು ತಿರುಚಿ ಅರ್ಥೈಸಿದರೆ, ಹಲವು ಬಗೆಯ ಅಜ್ಞಾನಪರಂಪರೆಯೇ ಎದುರಾಗುವುದು. ಮತೀಯ ಸಂಘರ್ಷ, ಧರ್ಮಯುದ್ಧ, ಮಾರಣಹೋಮಗಳೇ ನಡೆಯುವುದು. ಜೀವನಕ್ಕೆ ಬೆಳಕು ನೀಡುವ ಉದ್ದೇಶ ಧರ್ಮದ ಉದ್ದೇಶ ವಿಫಲವಾಗುತ್ತದೆ, ಮಹಾತ್ಮರ ಜನನ ವ್ಯರ್ಥವಾಗುತ್ತದೆ. ವಿವೇಚನೆ, ವಿಶಾಲಭಾವನೆ, ಧರ್ಮದ ತಿರುಳನ್ನು ಅರಿಯುವ ಬುದ್ಧಿವಂತಿಕೆ – ಇವುಗಳಿದ್ದರೆ ಮಾತ್ರ ಧರ್ಮ ಗಳ ಬೆಳಕಿನ ಹಾದಿ ಗೋಚರವಾಗುವುದು.

*(ಮುಂದಿನ ಸಂಚಿಕೆಗೆ)*

# ಸಾಧನೆಯ ಮಾರ್ಗಗಳು



❁ ಎಲ್ಲಾ ಮಾರ್ಗಗಳಿಂದಲೂ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು. ಎಲ್ಲಾ ಧರ್ಮಗಳೂ ಸತ್ಯವಾದುವೆ. ನಮ್ಮ ಮುಖ್ಯವಾದ ಕರ್ತವ್ಯ ಚಾವಣಿಗೆ ಹತ್ತಿ ಹೋಗುವುದು. ಆ ಕಾರ್ಯವನ್ನು ಮೆಟ್ಟಿಲ ಸಾಲಿನಿಂದಾಗಲಿ, ಬೊಂಬಿನ ಏಣಿಯಿಂದಾಗಲಿ ಅಥವಾ ಒಂದು ಹಗ್ಗದಿಂದಾಗಲಿ ಸಾಧಿಸಬಹುದು. ಅಷ್ಟೇ ಅಲ್ಲ, ಕೇವಲ ಬೊಂಬಿನಿಂದಲೇ ಹತ್ತಿಬಿಡಬಹುದು.

❁ ನೀವು ಹೇಳಬಹುದು, ಪರರ ಧರ್ಮಗಳಲ್ಲಿ ಅನೇಕ ಕುಂದುಕೊರತೆಗಳಿವೆ ಎಂಬುದಾಗಿ. ನನ್ನ ಉತ್ತರ: ಇದ್ದರೆ ತಾನೆ ಏನು? ಪ್ರತಿಯೊಂದು ಧರ್ಮದಲ್ಲೂ ಇದ್ದೇ ಇದೆ. ಎಲ್ಲರೂ ಭಾವಿಸುತ್ತಾರೆ ತಮ್ಮ ಗಡಿಯಾರ ಸರಿಯಾಗಿ ನಡೆದುಕೊಂಡು ಹೋಗುತ್ತಿದೆ ಎಂಬುದಾಗಿ. ಆಂತರ್ಯದಲ್ಲಿ ವ್ಯಾಕುಲತೆ ಇದ್ದರೇ ಯಥೇಷ್ಟ. ಭಗವಂತನಲ್ಲಿ ಪ್ರೀತಿ ಇದ್ದರೇ ಸಾಕು. ಆತ ಅಂತರ್ಯಾಮಿ. ನಮ್ಮ ಆಂತರ್ಯದಲ್ಲಿರುವ ಪ್ರೀತಿ ವ್ಯಾಕುಲತೆ ಏನು ಎಂಬುದನ್ನು ಆತ ಅರಿತುಕೊಳ್ಳಬಲ್ಲ. ಉದಾಹರಣೆಗೆ ಒಬ್ಬನಿಗೆ ಅನೇಕ ಮಕ್ಕಳು ಅಂತ ಇಟ್ಟುಕೊಳ್ಳಿ. ದೊಡ್ಡ ಮಕ್ಕಳು ಆತನನ್ನು ಸ್ಪಷ್ಟವಾಗಿ 'ಅಪ್ಪ' 'ಅಯ್ಯ' ಎಂಬುದಾಗಿ ಕರೆಯುತ್ತವೆ. ಆದರೆ ಎಳೆಯ ಮಕ್ಕಳು ಅತಿ ಹೆಚ್ಚೆಂದರೆ 'ಪಾ,' 'ಯಾ' ಎಂಬುದಾಗಿ ಕರೆಯಬಲ್ಲುವು. ಈ ರೀತಿ ಅಸ್ಪಷ್ಟವಾಗಿ ಮಾತನಾಡುವ ಮಕ್ಕಳ ಮೇಲೆ ತಂದೆ ಕೋಪಿಸಿಕೊಳ್ಳುತ್ತಾನೇನು? ತಂದೆಗೂ ಗೊತ್ತಿದೆ ಅವೂ ತನ್ನನ್ನೇ ಕರೆಯುತ್ತಿವೆ, ಆದರೆ ಅವಕ್ಕೆ ತನ್ನ ಹೆಸರನ್ನು ಸ್ಪಷ್ಟವಾಗಿ ಉಚ್ಚರಿಸಲು ಸಾಧ್ಯವಾಗುತ್ತಿಲ್ಲ ಎಂಬುದಾಗಿ. ತಂದೆಗೆ ಎಲ್ಲಾ ಮಕ್ಕಳೂ ಒಂದೇ ಸಮ. ಹಾಗೆಯೇ ಭಕ್ತರೂ ಆತನನ್ನೇ ಕರೆಯುತ್ತಾರೆ, ಆದರೆ ವಿವಿಧ ಹೆಸರುಗಳಿಂದ. ಎಲ್ಲರೂ ಆ ಒಬ್ಬನನ್ನೇ ಕರೆಯುತ್ತಿರುವುದು. ಭಗವಂತ ಒಬ್ಬನೇ, ಆದರೆ ಆತನಿಗೆ ಹೆಸರು ಮಾತ್ರ ಅನೇಕ.

❁ ಶಿಷ್ಯ: ಇಡೀ ಜೀವನದಲ್ಲೆಲ್ಲಾ ಸಾಧನೆ ಮಾಡಿಕೊಂಡು ಹೋಗುತ್ತಿರಬೇಕೇ?

ಶ್ರೀರಾಮಕೃಷ್ಣರು: ಇಲ್ಲ, ಮೊದಲು ಸ್ವಲ್ಪ ಕಾಲ ಸೊಂಟ ಕಟ್ಟಬೇಕಾಗುತ್ತದೆ. ಬಳಿಕ ಅಷ್ಟು ಶ್ರಮ ತೆಗೆದುಕೊಳ್ಳಬೇಕಾಗಿಲ್ಲ. ಎಲ್ಲಿಯವರೆಗೆ ದೋಣಿ ಅಲೆ, ಬಿರುಮಳೆ, ಬಿರುಗಾಳಿ ಇವುಗಳ ಮೂಲಕ ಅಥವಾ ನದಿಯ ತಿರುವಿನ ಮೂಲಕ ಹಾದು ಹೋಗಬೇಕಾಗಿರುವುದೋ ಅಲ್ಲಿಯವರೆಗೆ ದೋಣಿ ನಡೆಸುವವ ಎದ್ದು ನಿಂತು ಚುಕ್ಕಾಣಿ ಹಲಗೆಯನ್ನು ಬಿಗಿಯಾಗಿ ಹಿಡಿದು ಕೊಂಡಿರಬೇಕಾಗುತ್ತದೆ. ಆದರೆ ಅದನ್ನು ದಾಟಿಯಾದ ನಂತರ ಅಷ್ಟು ಶ್ರಮ ತೆಗೆದುಕೊಳ್ಳಬೇಕಾಗಿಲ್ಲ. ಅದು ತಿರುವನ್ನು ಹಾದ ನಂತರ ಅನುಕೂಲವಾದ ಗಾಳಿ ಬೀಸಲಾರಂಭಿಸಿದರೆ ಚುಕ್ಕಾಣಿ ಹಲಗೆಯನ್ನು ಸುಮ್ಮನೆ ಕೈಯಲ್ಲಿ ಹಿಡಿದುಕೊಂಡು ಹಾಯಾಗಿ ಕುಳಿತುಕೊಳ್ಳುತ್ತಾನೆ. ಬಳಿಕ ಪಟ ಕಟ್ಟಲು ವ್ಯವಸ್ಥೆ ಮಾಡಿ ತಂಬಾಕು ಸೇದಲು ಸಿದ್ಧನಾಗುತ್ತಾನೆ. ಹಾಗೇನೆ ಸಾಧಕನು ಕಾಮ-ಕಾಂಚನಗಳ ಬಿರುಗಾಳಿ, ಬಿರುಮಳೆ ಇವನ್ನೆಲ್ಲಾ ದಾಟಿಬಿಟ್ಟ ಅಂದರೆ ಆಗ ಆತನಿಗೆ ಶಾಂತಿ.

❁ ಆತನ ಸಾಕ್ಷಾತ್ಕಾರಮಾಡಿಕೊಳ್ಳಬೇಕಾದರೆ ಯಾವುದಾದರೂ ಒಂದು ಭಾವವನ್ನು ಆಶ್ರಯಿಸಿಕೊಳ್ಳಬೇಕಾಗುತ್ತದೆ– ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಇವುಗಳಲ್ಲಿ ಯಾವುದಾದರೂ ಒಂದನ್ನು.

**ಶಾಂತ** – ಋಷಿಗಳು ಅನುಸರಿಸಿದುದು. ಅವರಿಗೆ ಭಗವಂತನ ಹೊರತು ಬೇರೆ ಯಾವುದರ ಮೇಲಿನ ಕಾಮನೆಯೂ ಇರಲಿಲ್ಲ. ಇದು ಸತಿಯು ಪತಿಯ ಮೇಲೆ ಇಟ್ಟಿರುವ ನಿಷ್ಠೆಯ ಹಾಗೆ. ಆಕೆಗೆ ಗೊತ್ತಿದೆ, ತನ್ನ ಪತಿ ಕಂದರ್ಪನೇ ಎಂಬುದಾಗಿ.

**ದಾಸ್ಯ**– ಹನುಮಂತನದು. ರಾಮನ ಕೆಲಸ ಮಾಡುತ್ತಿರುವಾಗ ಸಿಂಹಪರಾಕ್ರಮಿಯಾಗುತ್ತಿದ್ದ. ಸತಿಯಲ್ಲೂ ಈ ಭಾವ ಇರುತ್ತದೆ – ಪ್ರಾಣಾಪಾಯವನ್ನು ಲೆಕ್ಕಿಸದೆ ಪತಿಸೇವೆ ಮಾಡುತ್ತಾಳೆ. ತಾಯಿಯಲ್ಲೂ ಇದು ಅಲ್ಪಸ್ವಲ್ಪ ಇರುತ್ತದೆ – ಯಶೋದೆಯಲ್ಲಿ ಇದ್ದ ಹಾಗೆ.

**ಸಖ್ಯ**– ಸ್ನೇಹಭಾವ. ಸ್ನೇಹಿತರು ಒಬ್ಬರನೊಬ್ಬರು ಆದರಿಸುತ್ತಾರೆ: 'ಬಾ, ಹತ್ತಿರ ಬಂದು ಕುಳಿತುಕೊ' ಎಂಬುದಾಗಿ. ಸುದಾಮನೇ ಮೊದಲಾದ ಸ್ನೇಹಿತರು ಕೆಲವು ವೇಳೆ ತಾವು ಎಂಜಲು ಮಾಡಿದ ಹಣ್ಣುಗಳನ್ನು ಶ್ರೀಕೃಷ್ಣನಿಗೆ ತಿನ್ನಿಸುತ್ತಿದ್ದರು. ಇನ್ನು ಕೆಲವು ವೇಳೆ ಆತನ ಹೆಗಲಮೇಲೂ ಹತ್ತಿಬಿಡುತ್ತಿದ್ದರು.

**ವಾತ್ಸಲ್ಯ**– ಯಶೋದೆಯದು. ಸತಿಯಲ್ಲೂ ಇದು ಸ್ವಲ್ಪ ಇರುತ್ತದೆ. ಆಕೆ ಪತಿಗೆ ತನ್ನ ಪ್ರಾಣ ಕೊಡಲೂ ಸಿದ್ಧಳಾಗಿರುತ್ತಾಳೆ. ಮಗು ಗಂಟಲವರೆಗೂ ತಿಂದರೆ ಆಗ ತಾಯಿಗೆ ತೃಪ್ತಿ. ಯಶೋದೆ ಕೃಷ್ಣನಿಗೆ ಬೆಣ್ಣೆ ತಿನ್ನಿಸಲೋಸುಗ ಅದನ್ನು ಕೈಯಲ್ಲಿ ಹಿಡಿದುಕೊಂಡು ಆತನೊಡನೆ ಸುತ್ತಾಡುತ್ತಿದ್ದಳು.

**ಮಧುರ** – ಶ್ರೀಮತಿಯದು (ರಾಧೆಯದು). ಸತಿಯಲ್ಲೂ ಈ ಭಾವ ಇದೆ. ಅದರಲ್ಲಿ ಉಳಿದ ನಾಲ್ಕೂ ಅಡಕವಾಗಿವೆ.

**ಶ್ರೀರಾಮಕೃಷ್ಣ ವಚನವೇದದಿಂದ**

# ಅದ್ವೈತ ವೇದಾಂತದ ಅಂತರಂಗಸಾಧನೆ

**ಸ್ವಾಮಿ ಕರುಣಾಕರಾನಂದ**



ಅದ್ವೈತ ಪರಂಪರೆಯಲ್ಲಿ ಶ್ರವಣ, ಮನನ, ನಿದಿಧ್ಯಾಸನಗಳು ಅತ್ಯಂತ ಪ್ರಧಾನವಾದ ಸಾಧನೆಯ ಹಂತಗಳಾವೆ. ಗುರುಪರಂಪರೆಯಿಂದ ಇವುಗಳನ್ನರಿತು ಅನುಷ್ಠಾನ ಮಾಡುವುದು ಹೇಗೆ ಬ್ರಹ್ಮಸಾಕ್ಷಾತ್ಕಾರಕ್ಕೆ ಅತ್ಯಗತ್ಯವೆಂಬುದನ್ನು ಇಲ್ಲಿ ತಿಳಿಸಿಕೊಡಲಾಗಿದೆ. ಲೇಖಕರು ದೇವಘರ್ ರಾಮಕೃಷ್ಣ ಮಿಷನ್ ವಿದ್ಯಾಪೀಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಉತ್ತಮ ಬರಹಗಾರರೂ, ವಾಗ್ಮಿಗಳೂ ಆಗಿರುವ ಅವರು '**ವಿವೇಕಪ್ರಭ**'ದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

ಅದ್ವೈತ ವೇದಾಂತದ ರೀತ್ಯಾ ಶುದ್ಧ ಇರವು, ಶುದ್ಧ ಅರಿವು, ಹಾಗೂ ದೇಶ-ಕಾಲಗಳ ಮೇರೆಯಿಲ್ಲದ ತತ್ತ್ವವಾದ ಬ್ರಹ್ಮವೊಂದೇ ಸತ್ಯವಾದುದು. ಅಂತಹ ಬ್ರಹ್ಮದಲ್ಲಿ ಅದಕ್ಕಿಂತಲೂ ಭಿನ್ನವಾಗಿ ತೋರುವ ಜಗತ್ತು, ಜೀವಗಳು ಮಿಥ್ಯೆ. ಈ ಭೇದವು ಬ್ರಹ್ಮದ ಅನಿರ್ವಚನೀಯ ಶಕ್ತಿಯಾದ ಮಾಯೆಯಿಂದ ಉಂಟಾಗಿರುವುದು. ಮಾಯೆಯೆಂಬ ಉಪಾಧಿಯಿಂದ ಈಶ್ವರ, ಜೀವ ಹಾಗೂ ಜಗತ್ತೆಂಬ ಭೇದದ ಕಲ್ಪನೆಯಾಗಿರುತ್ತದೆ. ಭೇದವು ನಿಜವಲ್ಲ. ಕಾಣುವುದಷ್ಟೆ. ಅದನ್ನಿಟ್ಟುಕೊಂಡೇ ವ್ಯಾವಹಾರಿಕ ಜಗತ್ತಿನಲ್ಲಿ ಎಲ್ಲವೂ ನಡೆಯುತ್ತಿರುವುದು. ಲೋಕದಲ್ಲಿ ಹೇಗೆ ಒಬ್ಬನೇ ಮನುಷ್ಯ ಉಪಾಧಿಯಿಂದ ಮೇಲಧಿಕಾರಿಯಾಗಿಯೂ, ಆಳಾಗಿಯೂ, ಗಂಡನಾಗಿಯೂ, ಮಗನಾಗಿಯೂ, ತಂದೆಯಾಗಿಯೂ ಕಾಣಿಸಿಕೊಳ್ಳುತ್ತಾನೆಯೋ ಹಾಗೆಯೇ, ಊಹೆಗೂ ಮೀರಿದ, ಅಸಂಭವವೆನ್ನಿಸುವುದನ್ನೂ ಸಂಭವವಾಗಿಸುವ ಬ್ರಹ್ಮನ ಶಕ್ತಿಯಾದ ಮಾಯೆಯು ಉಪಾಧಿಯಿಂದ ಎರಡಿಲ್ಲದ ಒಂದೇ ತತ್ತ್ವವಾಗಿರುವ ಬ್ರಹ್ಮವನ್ನು ಅನೇಕವಾದಂತೆ ಅನುಭವಕ್ಕೆ ತರುತ್ತಾಳೆ. ಎಲ್ಲಿಯವರೆಗೂ ಈ ಭೇದ ಸತ್ಯವೆಂಬುದಾಗಿ ಅನುಭವಕ್ಕೆ ಬರುವುದೋ ಅಲ್ಲಿಯವರೆಗೆ ಮಾನವ ಎಂದಿಗೂ ಆತ್ಯಂತಿಕ ಸುಖವನ್ನು, ಶಾಂತಿಯನ್ನು ಹೊಂದಲಾರ. ಭೇದವೇನಾದರೂ ಸತ್ಯವಾಗಿದ್ದಲ್ಲಿ ಅದು ಎಂದೆಂದಿಗೂ ಇರುವುದಾದ್ದರಿಂದ ಮಾನವ ಎಂದಿಗೂ ಬ್ರಹ್ಮಾತ್ಮೈಕ್ಯ ರೂಪದ ಮುಕ್ತಿಯನ್ನು ಹೊಂದಲಾರ. ಆದರೆ ಭೇದವು ಸ್ವಭಾವತಃ ಮಿಥ್ಯೆಯಾಗಿರುತ್ತದೆ. ಅದ್ವೈತ ವೇದಾಂತದ ಪ್ರಕಾರ ಬ್ರಹ್ಮವೂ ಜೀವವೂ ಒಂದೇ. ಜಗತ್ತು ನಿಜವಾಗಿಯೂ ಬ್ರಹ್ಮವೇ. ಹಾಗೆ ಯಥಾರ್ಥ ಜ್ಞಾನವುಂಟಾದಾಗ ಮಾತ್ರ ಮುಕ್ತಿ.

ಹಿಂದೆ ತಿಳಿಸಿದಂತೆ ಭೇದ ಅನುಭವಕ್ಕೆ ಬರುವುದು ಎಂದೆವಲ್ಲ. ಯಾವುದರಿಂದ ಅನುಭವಕ್ಕೆ ಬರುತ್ತದೆ? ಯಾವುದರ ಜ್ಞಾನಕ್ಕೆ ವಿಷಯವಾಗುತ್ತದೆ? - ಎಂದರೆ ಬುದ್ಧಿಗೆ. ಈ ರೀತಿಯ ಸುಳ್ಳಾದ ಭೇದವು ಬುದ್ಧಿಯಿಂದ ತಿಳಿದುಬರುತ್ತದೆಯಷ್ಟೆ. ಆ ಬುದ್ಧಿಯಲ್ಲಿರುವ ಚೈತನ್ಯದ ಪ್ರತಿಬಿಂಬಕ್ಕೆ ಜೀವವೆಂದು ವ್ಯವಹಾರವಿದೆ. ಅವಿದ್ಯಾಶಕ್ತಿಯಿಂದ ಆ ಪ್ರತಿಬಿಂಬಿತ ಚೈತನ್ಯದಲ್ಲಿ ಬುದ್ಧಿಯ, ಶರೀರದ, ಪ್ರಾಣದ, ಇಂದ್ರಿಯಗಳ, ಧರ್ಮದ ಗುಣಗಳು ಆರೋಪವಾಗುತ್ತವೆ. ಅವುಗಳಲ್ಲಿ ಆತ್ಮದ ಸತ್ಯತ್ವ, ಪ್ರಿಯತ್ವ ಹಾಗೂ ಚೇತನತ್ವಗಳು ಆರೋಪಗೊಳ್ಳುತ್ತವೆ. ಹೀಗೆ ಒಂದರ ಧರ್ಮವು ಇನ್ನೊಂದರಲ್ಲಿ ಪರಸ್ಪರ ಆರೋಪವಾಗುವುದಕ್ಕೆ 'ಅಧ್ಯಾಸ'ವೆನ್ನುತ್ತಾರೆ. ಈ ಅಧ್ಯಾಸದಿಂದಲೇ ಎಲ್ಲ ವ್ಯವಹಾರಗಳೂ, ಸಂಸಾರವೂ ಸಾಧ್ಯ. ಇದೇ ಬಂಧನ. ಆದರೆ ಈ ಅಧ್ಯಾಸವೆಂಬುದು ಮಿಥ್ಯೆ. ಈ ಅಧ್ಯಾಸವನ್ನು ಹೋಗಲಾಡಿಸುವುದೇ ಅದ್ವೈತವೇದಾಂತದ ಪರಮಸಾಧನೆ.

### ಮಹೌಷಧವೇನು?

ಈಗ ಸಂಸಾರವೆಂಬ ರೋಗ ಅಂಟಿಕೊಂಡಿರುವ ಜೀವಿಗೆ ಚಿಕಿತ್ಸೆ ಒಳಗಿನಿಂದಲೇ ನಡೆಯಬೇಕು. ಯಾಕೆಂದರೆ ಆ ರೋಗವು

ಒಳಗಿನದು, ಆಧ್ಯಾತ್ಮಿಕ. ಹೀಗಾಗಿ ಸಾಧನೆಯು ಕೂಡ ಅಲ್ಲೇ ನಡೆಯಬೇಕು. ಅಂದರೆ ತಪ್ಪುತಿಳುವಳಿಕೆಯಿಂದಾದ ರೋಗವನ್ನು ನಾಶ ಮಾಡಲು ಸರಿಯಾದ ತಿಳುವಳಿಕೆಯನ್ನು ತರುವುದಷ್ಟೆ. ಆದ್ದರಿಂದಲೇ ಬೃಹದಾರಣ್ಯಕೋಪನಿಷತ್ತು *(೨.೪.೫)* ಆದೇಶಿಸುತ್ತದೆ: ''**ಆತ್ಮಾ ವಾ ಅರೇ ದ್ರಷ್ಟವ್ಯೋ, ಶ್ರೋತವ್ಯೋ, ಮಂತವ್ಯೋ, ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿದಿತಮ್.**'' ''ಎಲೈ (ಮೈತ್ರೇಯಿ), ಆತ್ಮವು ದರ್ಶನ ಮಾಡಲ್ಪಡಬೇಕು, ಶ್ರವಣ ಮಾಡಲ್ಪಡಬೇಕು, ಮನನ ಮಾಡಲ್ಪಡಬೇಕು, ನಿದಿಧ್ಯಾಸನ ಮಾಡಲ್ಪಡಬೇಕು. ಹೇ ಮೈತ್ರೇಯಿ, ಆತ್ಮನ ದರ್ಶನದಿಂದ, ಶ್ರವಣದಿಂದ, ಮನನದಿಂದ, ವಿಜ್ಞಾನದಿಂದ ಇವೆಲ್ಲವೂ ಅರಿಯಲ್ಪಡುತ್ತವೆ.'' ಹಾಗೆಯೇ ''**ತಸ್ಮಾದೇವಂ ವಿಚ್ಛಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ**'' ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ *(೪.೪.೨೩)* ಹೇಳಿದೆ. ಆದ್ದರಿಂದ ಹೀಗೆ ಅರಿತು, ಶಾಂತನೂ, ದಾಂತನೂ, ಉಪರತನೂ, ತಿತಿಕ್ಷುವೂ, ಸಮಾಹಿತನೂ ಆಗಿ ಮನಸ್ಸಿನಲ್ಲಿಯೇ ಆತ್ಮನನ್ನು ನೋಡುತ್ತಾನೆ. ಅದ್ವೈತ ವೇದಾಂತದಲ್ಲಿ ಸಾಧನೆಯನ್ನು ಅಂತರಂಗ ಮತ್ತು ಬಹಿರಂಗವೆಂಬುದಾಗಿ ಎರಡು ರೀತಿಯಾಗಿ ವಿಂಗಡಿಸಲಾಗಿದೆ. ನಾಲ್ಕು ಸಾಧನಗಳು ಬಹಿರಂಗ ಸಾಧನಗಳು. ಶ್ರವಣ, ಮನನ ಹಾಗೂ ನಿದಿಧ್ಯಾಸನಗಳು ಅಂತರಂಗ ಸಾಧನಗಳು. ಅವನ್ನೇ ಈ ಮೇಲಿನ ಮಂತ್ರಗಳಲ್ಲಿ ಹೇಳಿರುವುದು. ಯಾವ ಸಾಧನೆಗಳನ್ನು ಮಾಡಿದರೆ ಅಂತರಂಗ ಸಾಧನಗಳಾದ ಶ್ರವಣಾದಿಗಳನ್ನು ಮಾಡಲು ಯೋಗ್ಯತೆ ಬರುವುದೋ, ಅಂತಹ ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ, ಸಮಾಧಿಗಳಾದ ಷಟ್‌ಸಂಪತ್ತಿ, ವಿವೇಕ, ವೈರಾಗ್ಯ ಮತ್ತು ಮುಮುಕ್ಷುತ್ವ ಇವೇ ಆ ನಾಲ್ಕು ಸಾಧನೆಗಳು ಬಹಿರಂಗಗಳು ಎಂದೆನಿಸಿಕೊಳ್ಳುತ್ತವೆ. ಹಾಗೆಯೇ, '**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ**' ಎಂಬ ಬೃಹದಾರಣ್ಯಕೋಪನಿಷತ್ತಿನ *(೪.೪.೨೨)* ಮಂತ್ರದಿಂದ ನಮಗೆ ತಿಳಿದುಬರುವುದೇನೆಂದರೆ, ಬ್ರಹ್ಮವನ್ನು ತಿಳಿದುಕೊಳ್ಳಬೇಕೆಂಬ ಬಯಕೆ ಹುಟ್ಟುವುದಕ್ಕೂ ಕೂಡ ಸಾಧನೆ ಮಾಡಿರಬೇಕಾಗುತ್ತದೆ. ನಿಷ್ಕಾಮವಾಗಿ ಯಜ್ಞ, ದಾನ ಹಾಗೂ ತಪಸ್ಸುಗಳನ್ನು ಮಾಡಿದಾಗ ಚಿತ್ತಶುದ್ಧಿಯಾಗುತ್ತದೆ. ಹಾಗೆಯೇ ಕಾಮೋಪಭೋಗಗಳನ್ನು ಸೇವಿಸದಿದ್ದಾಗ ಮನಸ್ಸು ಶುದ್ಧವಾಗಿ ಬ್ರಹ್ಮವನ್ನು ಅರಿಯಬೇಕೆಂಬ ಬಯಕೆ ಉದಿಸುತ್ತದೆ. ನಿಷ್ಕಾಮಕರ್ಮವೂ ಬಹಿರಂಗಸಾಧನೆಯೆ. ವಾಚಸ್ಪತಿಮಿಶ್ರರು ಈ ಸಾಧನೆಗಳಿಗೆ ಪರೋಕ್ಷವಾಗಿ ಉಪಕಾರ ಮಾಡುವ ಅಥವಾ ದೂರವಿದ್ದು ಉಪಕಾರ ಮಾಡುವ (**ಆರಾದ್ ಉಪಕಾರಕಾಣಿ**) ಸಾಧನೆಗಳೆಂದು ಕರೆಯುತ್ತಾರೆ. ಏಕೆಂದರೆ, ಈ ಸಾಧನೆಗಳು ನೇರವಾಗಿ ಸಹಾಯ ಮಾಡುವ ಸಾಧನೆಗಳಿಗೆ ಉಪಕಾರ ಮಾಡುವಂತಹದ್ದು. ಮನನ ಹಾಗೂ ನಿದಿಧ್ಯಾಸನಗಳಿಂದ ಕೂಡಿದ ಶ್ರವಣವೊಂದೇ ಅಪರೋಕ್ಷಾನುಭೂತಿಗೆ ನೇರವಾದ ಸಾಧನವಾದ್ದರಿಂದ ಅದು ಅಂತರಂಗ ಸಾಧನೆ. ಅವುಗಳನ್ನು ಹತ್ತಿರದಿಂದ ಉಪಕಾರ ಮಾಡುವ (**ಸನ್ನಿಪತ್ಯೋಪಕಾರಕಾಣಿ**) ಸಾಧನೆಗಳೆಂದೂ ಹೇಳಬಹುದು. ಜ್ಞಾನವೊಂದೇ ನೇರವಾಗಿ ಉಪಕಾರ ಮಾಡುವ ಸಾಧನೆ. ಜ್ಞಾನ ಹಾಗೂ ಕರ್ಮಗಳೆರಡನ್ನೂ ಒಟ್ಟಿಗೆ ಸಾಧನೆಯನ್ನಾಗಿ ಮಾಡಿಕೊಳ್ಳುವುದನ್ನು (ಸಮುಚ್ಚಯ) ಅದ್ವೈತ ವೇದಾಂತವು ಒಪ್ಪುವುದಿಲ್ಲ.

### ಉಪನಿಷತ್ತುಗಳ ಬೋಧನಾ ಶೈಲಿ

ಇನ್ನು ಸಾಧನಚತುಷ್ಟಯವನ್ನು ಹೊಂದಿದ ಅಧಿಕಾರಿ ವ್ಯಕ್ತಿಗಳು ಯಾರಿದ್ದಾರೋ, ಅವರಿಗೆ ವೇದಾಂತ ಅಥವಾ ಉಪನಿಷತ್ತನ್ನು ಓದುವ ಯೋಗ್ಯತೆ ಬರುತ್ತದೆ. ಸಾಧನಚತುಷ್ಟಯದಲ್ಲಿರುವ 'ಉಪರತಿ' ಎಂಬ ಶಬ್ದಕ್ಕೆ ಸಂನ್ಯಾಸಪೂರ್ವಕವಾಗಿ ಕರ್ಮತ್ಯಾಗವೆಂದು ಹೇಳಿರುವುದರಿಂದ ಸಂನ್ಯಾಸಿಗೇ ಶ್ರವಣಾದಿ ಸಾಧನೆಗಳಲ್ಲಿ ಅಧಿಕಾರ. ಅಧಿಕಾರಿಯಾದ ಮುಮುಕ್ಷುವು ಸಂಪ್ರದಾಯ ಬಲ್ಲ ಆಚಾರ್ಯನ ಬಳಿಯಲ್ಲಿ ವೇದಾಂತ ಅಧ್ಯಯನ ನಡೆಸುತ್ತಾನೆ. ಸಂಪ್ರದಾಯ ಗೊತ್ತಿಲ್ಲದ ಆಚಾರ್ಯನ ಬಳಿಯಲ್ಲಿಯೋ ಅಥವಾ ಸ್ವಂತ ಅಧ್ಯಯನದ ಮೂಲಕವೋ ಉಪನಿಷತ್ತನ್ನು ತಿಳಿಯಲು ಪ್ರಯತ್ನಿಸಬಾರದು. ಮುಂಡಕೋಪನಿಷತ್ತಿನ *(೧.೨.೧೨)* '**....ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್**', 'ಬ್ರಹ್ಮವನ್ನು ಕುರಿತಾಗಿ ಅರಿಯಲು ಸಾಧಕನು ಯೋಗ್ಯ ಗುರುವನ್ನೇ ಬಳಿಸಾರಬೇಕು' ಎಂಬ ಮಂತ್ರಕ್ಕೆ ವ್ಯಾಖ್ಯಾನ ನೀಡುತ್ತ ಭಗವಾನ್ ಭಾಷ್ಯಕಾರರು ಶಾಸ್ತ್ರಜ್ಞನಾದರೂ ಸ್ವತಂತ್ರವಾಗಿ ಬ್ರಹ್ಮಜ್ಞಾನವನ್ನು ಅರಸಬಾರದು ಎಂದಿದ್ದಾರೆ. ತಮ್ಮ ವಿವೇಕಚೂಡಾಮಣಿಯಲ್ಲಿ *(೧೧೪)* ಹೇಳುತ್ತಾರೆ: 'ಬಹಳ ಬುದ್ಧಿವಂತನಾಗಿ, ಶಾಸ್ತ್ರಪಾಂಡಿತ್ಯವನ್ನು ಹೊಂದಿದ್ದು ಅತ್ಯಂತ ಸೂಕ್ಷ್ಮವಾದ ಆತ್ಮತತ್ತ್ವವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಚತುರನಾಗಿದ್ದರೂ, ತಮಸ್ಸಿನಿಂದ ಆವೃತನಾಗಿ ಅನೇಕ ಬಾರಿ ಅನೇಕ ರೀತಿಯಲ್ಲಿ ತಿಳಿಸಿದರೂ ತಿಳಿಯಲು ಸಮರ್ಥನಾಗಿರುವುದಿಲ್ಲ! ತಾನು ಭ್ರಾಂತಿಯಿಂದ ಆರೋಪಿಸಿಕೊಂಡಿದ್ದನ್ನೇ ಸರಿಯಾಗಿದೆಯೆಂಬುದಾಗಿ ತಿಳಿಯುತ್ತ ತಮಸ್ಸಿನ ಅಥವಾ ಅಜ್ಞಾನದ ಕಾರ್ಯಕ್ಕೆ ಅಂಟಿಕೊಳ್ಳುವನು. ಅಹಹ! ದುರ್ಧರವಾದ ತಮಸ್ಸಿನ ಮಹಾನ್ ಆವರಣಶಕ್ತಿಯು ಅದೆಷ್ಟು ಪ್ರಬಲ!'

ಅಷ್ಟೆ ಅಲ್ಲದೆ, ಉಪನಿಷತ್ತಿನ ಬೋಧನಾಶೈಲಿಯು ರಹಸ್ಯವೂ ಅಧ್ಯಾರೋಪ-ಅಪವಾದಗಳ ಮೂಲಕವೂ ಆಗಿರುವುದರಿಂದ, ಆ ಸಂಪ್ರದಾಯ ಬಲ್ಲ ಆಚಾರ್ಯನೊಬ್ಬನೇ ಉಪದೇಶ ಮಾಡಬಲ್ಲ. ಏನಿದು ಅಧ್ಯಾರೋಪ-ಅಪವಾದ ಶೈಲಿಯೆಂದರೆ, ಏಕಮೇವಾದ್ವಿತೀಯ (ಅಂದರೆ ಯಾವುದೇ ಭೇದವಿಲ್ಲದ, ಒಂದೇ ಆದ) ಬ್ರಹ್ಮವಸ್ತುವನ್ನು ಅರಿಯಬೇಕಾದರೆ ಉಪನಿಷತ್ತು ಬೋಧಿಸುವ ವಿಧಾನ. ಬ್ರಹ್ಮನು ನಿಷ್ಕಲನು (ಯಾವುದೇ ಅಂಶವಿಲ್ಲದವನು), ನಿಷ್ಕ್ರಿಯನು (ಸೃಷ್ಟಿ, ಸ್ಥಿತಿ, ಪ್ರಲಯಗಳಂತಹ ಯಾವುದೇ ಕ್ರಿಯೆಯಿಲ್ಲದವನು), ಕೂಟಸ್ಥನು (ಯಾವುದೇ

ಪರಿಣಾಮವನ್ನು ಹೊಂದದ ಅಚಲನು), ಅವನಿಗೆ ಎರಡನೆಯದಾಗಿ ಬೇರೆ ಎಂಬುದು ಏನೂ ಇಲ್ಲದವನು. ಇಂತಹ ಬ್ರಹ್ಮನಲ್ಲಿ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಕಾರಣವನ್ನು ಆರೋಪಿಸುವುದೇ ಅಧ್ಯಾರೋಪ. ಅದೇ ಬ್ರಹ್ಮನು ಆತ್ಮನಾಗಿ ಎಲ್ಲದರ ಒಳಗೂ ಹೊಕ್ಕಿರುತ್ತಾನೆ ಎಂದು ಜೀವದ ಅಸ್ತಿತ್ವವನ್ನೂ ತಿಳಿಸುತ್ತ ವ್ಯವಹಾರದೆಸೆಯಲ್ಲಿ ನಮ್ಮ ಅನುಭವವನ್ನು ಯಥಾಪ್ರಕಾರ ತಿಳಿಸುತ್ತ ಶ್ರುತಿಯು ಅದಕ್ಕೆ ಬ್ರಹ್ಮವನ್ನು ಜೋಡಿಸುತ್ತದೆ. ಇದೇ ಅಧ್ಯಾರೋಪ. ನಂತರ ಬ್ರಹ್ಮನ ಹೊರತಾದ ಎಲ್ಲವನ್ನೂ ನಿರಾಕರಿಸುವ **‘ಅಥಾತ ಆದೇಶ ನೇತಿ, ನೇತಿ..’** *(ಬೃಹದಾರಣ್ಯಕ, ೨.೩.೬)* ‘ಆದ್ದರಿಂದ, ಇನ್ನು ಮುಂದೆ (ಬ್ರಹ್ಮದ) ಉಪದೇಶವು ಇದಲ್ಲ, ಇದಲ್ಲ ಎಂಬುದಾಗಿ’ ಎಂಬ ಮಂತ್ರವನ್ನು ಹೇಳಿ ಬ್ರಹ್ಮದಲ್ಲಿ ಯಾವ ದ್ವೈತವೂ ಇಲ್ಲವೆಂದು ಸಾರಾಸಗಟಾಗಿ ನಿರಾಕರಿಸುವ ವಿಧಾನಕ್ಕೆ ಅಪವಾದವೆಂದು ಹೆಸರು. ಈ ಎರಡು ವಿಧಾನಗಳನ್ನು ಬಿಟ್ಟು ಶ್ರುತಿಯು ಅತ್ಯಂತ ಸೂಕ್ಷ್ಮವೂ, ಅರಿಯಲ್ಪಡುವವನ ಸ್ವರೂಪವೇ ಆದ ಬ್ರಹ್ಮವನ್ನು ಬೇರೆ ಮಾರ್ಗದಲ್ಲಿ ಉಪದೇಶಿಸಿರುವುದಿಲ್ಲ. ವಿದ್ಯಾರಣ್ಯರು ತಮ್ಮ ‘ಅನುಭೂತಿಪ್ರಕಾಶ’ವೆಂಬ ಗ್ರಂಥದಲ್ಲಿ ಹೇಳುತ್ತಾರೆ,

**ಅಧ್ಯಾರೋಪೋ ಮಾಯಿಕೋಽಯಮುಕ್ತೋಽಥಾಸಾವಪೋಹ್ಯತೇ।**
**ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ॥** *(೧.೧೮)*

‘ಅಧ್ಯಾರೋಪವು ಮಾಯೆಯ ಕಾರ್ಯ ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಅದು ನಿವಾರಿಸಲ್ಪಡುತ್ತದೆ. ಪ್ರಪಂಚದ ಸೋಂಕೇ ಇಲ್ಲದ ಬ್ರಹ್ಮವು ಅಧ್ಯಾರೋಪ-ಅಪವಾದ ವಿಧಾನದಿಂದ ವಿವರಿಸಲ್ಪಡುತ್ತದೆ.’

## ವಾಕ್ಯಶಕ್ತಿ ಮತ್ತು ಶಬ್ದವೊಂದೇ ಜ್ಞಾನಕ್ಕೆ ಯಥೇಷ್ಟ

**ಮಾಹಾತ್ಮ್ಯಮೇತಚ್ಛಬ್ದಸ್ಯ ಯದವಿದ್ಯಾಂ ನಿರಸ್ಯತಿ।**
**ಸುಷುಪ್ತ ಇವ ನಿದ್ರಾಯಾ ದುರ್ಬಲತ್ವಾಚ್ಚ ಬಾಧತೇ ॥**
**ದುರ್ಬಲತ್ವಾದವಿದ್ಯಾಯಾ ಆತ್ಮತ್ವಾದ್ ಬೋಧರೂಪಿಣಃ ।**
**ಶಬ್ದಶಕ್ತೇರಚಿಂತ್ಯತ್ವಾದ್ ವಿದ್ಮಸ್ತಂ ಮೋಹಹಾನತಃ ॥**
*(ಬೃಹದಾರಣ್ಯಕ ಭಾಷ್ಯ ವಾರ್ತಿಕಮ್ ೧.೪.೮೫೯–೮೬೦)*

‘ಗಾಢವಾಗಿ ನಿದ್ರಿಸುತ್ತಿರುವವನನ್ನೂ ಎಚ್ಚರಗೊಳಿಸುವುದೇ (ಆ ಗಾಢನಿದ್ರೆಯಲ್ಲಿ ಇಂತಹ ಶಬ್ದಕ್ಕೆ ಇಂತಹದೇ ಅರ್ಥ ಎಂದು ತಿಳಿಯಲು ಸಾಧ್ಯವೇ ಇಲ್ಲದಿದ್ದರೂ!), (ತನ್ನ ಸ್ವರೂಪದ) ಅವಿದ್ಯೆಯನ್ನೂ ನಾಶಗೈಯ್ಯುವುದೇ ಈ ಶಬ್ದಕ್ಕಿರುವ ಮಾಹಾತ್ಮ್ಯೆ. ತನಿ ನಿದ್ರೆಯಲ್ಲಿ ಕವಿದಿರುವ ಅಜ್ಞಾನವು ಶಬ್ದದ ಅಚಿಂತ್ಯಶಕ್ತಿಗಿಂತಲೂ ದುರ್ಬಲವಾದ್ದರಿಂದಲೇ ಬಾಧಿಸಲ್ಪಡುತ್ತದೆ. ಹಾಗೆಯೇ, (ಬ್ರಹ್ಮಾಕಾರವೃತ್ತಿ) ಜ್ಞಾನಸ್ವರೂಪವಾದ ಆತ್ಮಕ್ಕಿಂತಲೂ ಅವಿದ್ಯೆಯು ದುರ್ಬಲವಾದ್ದರಿಂದಲೇ ಬಾಧಿಸಲ್ಪಡುತ್ತದೆ. ಶಬ್ದದ ಇಂತಹ ಅಚಿಂತ್ಯ ಶಕ್ತಿಯಿಂದ ಮೋಹವನ್ನು ನಾಶ ಮಾಡುವುದರೊಂದಿಗೆ ನಾವು ಆತ್ಮವನ್ನು ಅರಿಯುತ್ತೇವೆ’ ಎನ್ನುತ್ತ ಸುರೇಶ್ವರರು ಶಬ್ದಕ್ಕೆ ಒಂದು ಅಚಿಂತ್ಯಶಕ್ತಿಯಿದೆ ಎಂದು ತೋರಿಸಿಕೊಡುತ್ತಾರೆ. ಲೌಕಿಕ ಜೀವನದಲ್ಲಿಯೂ ನಾವು ನೋಡುತ್ತೇವೆ, ಯಾವುದೋ ಮೋಹಕ್ಕೊಳಗಾಗಿ ಒಬ್ಬ ಮಹಾಶಕ್ತಿಶಾಲಿ ವ್ಯಕ್ತಿ ನಿರಾಶಾಭಾವನೆಯಿಂದ ಏನೂ ಕೈಲಾಗದವನಂತೆ ಇದ್ದು, ತನ್ನ ಹಿತೈಷಿಗಳ ಆತ್ಮವಿಶ್ವಾಸದ ನುಡಿಗಳನ್ನು ಕೇಳುತ್ತಿದ್ದಂತೆ ತನ್ನ ಹಿಂದಿನ ಶಕ್ತಿಯನ್ನು ಪಡೆದು ಮಹತ್ಕಾರ್ಯಗಳನ್ನು ಸಾಧಿಸುವುದನ್ನು. ರಾಮಾಯಣದ ವೀರ ಹನುಮಂತ ಇದಕ್ಕೆ ಉದಾಹರಣೆ. ಹಾಗೆಯೇ ಒಬ್ಬ ಪದೇ ಪದೇ ಹತಾಶೆಯ ನುಡಿಗಳನ್ನು ಕೇಳುತ್ತ ತನ್ನ ಸಾಮರ್ಥ್ಯವನ್ನು ಕಳೆದುಕೊಂಡಂತೆ ವರ್ತಿಸುವುದನ್ನೂ ನೋಡುತ್ತೇವೆ. ಮಹಾಭಾರತದ ಕರ್ಣ ಇದಕ್ಕೆ ನಿದರ್ಶನ. ಈ ಉದಾಹರಣೆಗಳಾದರೋ ಅರ್ಥವನ್ನು ತಿಳಿದು ವ್ಯಕ್ತಿತ್ವದಲ್ಲಿ ಬದಲಾವಣೆ ಉಂಟುಮಾಡುವ ವಾಕ್ಯದ ಶಕ್ತಿ. ಆದರೆ, ಸುರೇಶ್ವರರು ಇಲ್ಲಿ ಹೇಳುತ್ತಿರುವುದು ಅರ್ಥ ತಿಳಿಯದೆ ಇದ್ದರೂ ಅಂತಹ ಅಜ್ಞಾನನಾಶಕ ಶಕ್ತಿ ಮಂತ್ರಗಳಿಗಿರುವಂತೆ ಶಬ್ದಕ್ಕಿದೆ ಎಂಬುದಾಗಿ.

ಬ್ರಹ್ಮಸೂತ್ರಭಾಷ್ಯದಲ್ಲಿ *(೧.೧.೩)* ಭಗವತ್ಪಾದರು ಹೇಳುತ್ತಾರೆ, **‘ಶಾಸ್ತ್ರಾದೇವ ಪ್ರಮಾಣಾದ್ ಬ್ರಹ್ಮ ಅಧಿಗಮ್ಯತೇ’**, ‘ಬ್ರಹ್ಮವು ಶಾಸ್ತ್ರಪ್ರಮಾಣದಿಂದ ಮಾತ್ರ ತಿಳಿದುಬರುತ್ತದೆ’. ಚಿತ್ಸುಖಾಚಾರ್ಯರು ಅಪರೋಕ್ಷಜ್ಞಾನಕ್ಕೆ ಶಬ್ದವೊಂದೇ ಸಾಧನವೆನ್ನುತ್ತಾರೆ. ಒಂದು ಬೆಂಕಿಯ ಕುಂಡಕ್ಕೆ ಸುಮ್ಮನೆ ಸ್ವಲ್ಪ ತುಪ್ಪವನ್ನು ಸುರಿದುಬಿಟ್ಟರೆ ಅದು ಹೋಮವಾಗದು. ಶಾಸ್ತ್ರಬದ್ಧವಾಗಿ ಮಾಡದೆ ಇರುವುದರಿಂದ ಅಂತಹ ಕರ್ಮದಿಂದ ‘ಅಪೂರ್ವ’ವೆಂಬ ಪುಣ್ಯ ಉತ್ಪತ್ತಿಯಾಗದು. ಫಲ ನೀಡದು. ಹಾಗೆಯೇ ಪರಿಶುದ್ಧ, ಸಂಸ್ಕೃತ ಮನಸ್ಸು, ಬ್ರಹ್ಮದಲ್ಲಿ ಏಕಾಗ್ರಗೊಂಡ ಮನಸ್ಸು ಶಬ್ದಪ್ರಮಾಣದಿಂದ ಅಪರೋಕ್ಷಾನುಭೂತಿಯನ್ನು ಹೊಂದುತ್ತದೆ ಎಂದು ವಿವರಣಕಾರರು ಪ್ರತಿಪಾದಿಸುತ್ತಾರೆ. ಶಬ್ದವೆಂದರೆ ಶಾಸ್ತ್ರವೇ. ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಿರುವ ಮಹಾವಾಕ್ಯಗಳು. ಒಬ್ಬನು ಇನ್ನೊಬ್ಬನಿಗೆ ‘ಹಸುವನ್ನು ಕರೆದು ಕೊಂಡು ಬಾ’ ಅಂದಾಗ, ಆ ವಾಕ್ಯವನ್ನು ಕೇಳಿದ ಇನ್ನೊಬ್ಬ ಹಾಗೆಯೇ ಹಸುವನ್ನು ಕರೆದುಕೊಂಡು ಬರುವನು. ಈ ವಾಕ್ಯವು ಇನ್ನೊಬ್ಬ ವ್ಯಕ್ತಿಯನ್ನು ಒಂದು ಕ್ರಿಯೆಯಲ್ಲಿ ಚೋದಿಸಿದ್ದರಿಂದ ಚೋದಕ ವಾಕ್ಯ. ಯಾರಿಗೆ ಹಸುವನ್ನು ತೆಗೆದುಕೊಂಡು ಬರುವಂತೆ ಮಾಡಲಾಯಿತೋ ಅವನು ಚೋದ್ಯ. ಇನ್ನು ಕೆಲವು ವಾಕ್ಯಗಳು ಹಾಗೆ ಚೋದಿಸುವುದಿಲ್ಲ, ಬದಲಾಗಿ ವಸ್ತುಸ್ಥಿತಿಯನ್ನು ತಿಳಿಸಿಕೊಡುತ್ತವೆಯಷ್ಟೆ. ಬಹಳ ಪ್ರಸಿದ್ಧವಾದುದು ‘ನೀನೇ ಹತ್ತನೆಯವನು’ ಎಂಬ ವಾಕ್ಯ. ಈ ಕಥೆಯನ್ನು ಭಗವಾನ್ ಭಾಷ್ಯಕಾರರು ತಮ್ಮ ತೈತ್ತಿರೀಯ ಉಪನಿಷತ್ತಿನ ಭಾಷ್ಯದಲ್ಲಿ ವಿವರಿಸಿದ್ದಾರೆ. ಹತ್ತು ಜನರು ದೋಣಿಯಿಂದ ನದಿಯೊಂದನ್ನು ದಾಟಿ ಆಚೆಯ ತೀರಕ್ಕೆ ಬಂದಿಳಿದ ಮೇಲೆ ಎಲ್ಲರೂ ದಡ ಮುಟ್ಟಿದ್ದಾರೋ ಎಂಬುದನ್ನು ಖಾತರಿಪಡಿಸಿಕೊಳ್ಳಲು ಎಣಿಸಿದಾಗ, ಎಣಿಸುವವನು ತನ್ನನ್ನು ಬಿಟ್ಟು ಎಣಿಸಿದ್ದರಿಂದ ಒಂಬತ್ತು ಜನರನ್ನೇ ಕಂಡು ದುಃಖಿತರಾದರಂತೆ. ಅವರೆಲ್ಲರೂ ಎಣಿಸಿ ತಮ್ಮಲ್ಲಿ ಹತ್ತನೆಯವನು ಮುಳುಗಿ

ಹೋದನೆಂದು ತಪ್ಪುತಿಳಿದು ಹೀಗೆ ಗೋಳಾಡುತ್ತಿರಬೇಕಾದರೆ ಅವರ ಸ್ಥಿತಿಯನ್ನು ದೂರದಿಂದ ಗಮನಿಸಿದ ಅವರ ಪರಿಚಿತರೊಬ್ಬರು ಮತ್ತೆ ಎಣಿಸಲು ಹೇಳಿದರು. ಅವರಲ್ಲೊಬ್ಬನು ಒಂಬತ್ತು ಜನರನ್ನು ಎಣಿಸಿದ ಮೇಲೆ, 'ಆ ಹತ್ತನೆಯವನು ನೀನೇ' ಎಂದರಂತೆ. ಆ ಮಾತನ್ನು ಕೇಳಿದ ಎಣಿಸುವವನಿಗೆ 'ನಾನೇ ಹತ್ತನೆಯವನು' ಎಂದು ಕೇಳಿ, ಹತ್ತನೆಯವನಾಗಿ ತನ್ನ ಜ್ಞಾನವುಂಟಾದಾಗ ಬಹಳ ಸಂತೋಷವಾಯಿತು. ಹಾಗೆಯೇ ವೇದಾಂತದಲ್ಲಿ ಸ್ವರೂಪವನ್ನು ತೋರಿಸಿಕೊಡುವ ವಾಕ್ಯಗಳಿವೆ. ಅಂತಹ ವಾಕ್ಯಗಳಿಗೆ ಪ್ರತಿಪಾದ್ಯ-ಪ್ರತಿಪಾದಕ ವಾಕ್ಯಗಳೆಂದೂ ಹೆಸರು. ಪ್ರತಿಪಾದ್ಯವು ಸ್ವರೂಪ. ಪ್ರತಿಪಾದಕ ಆ ವಾಕ್ಯ. ಮಹಾವಾಕ್ಯಗಳಲ್ಲಿ ಇರುವುದು ಈ ತರಹದ ಪ್ರತಿಪಾದ್ಯ-ಪ್ರತಿಪಾದಕ ಸಂಬಂಧ. ಇಂತಹ ವಾಕ್ಯಗಳಿಂದ ಸತ್ಯ ತಿಳಿದ ನಂತರ, ಮೇಲಿನ ಚೋದಕ ವಾಕ್ಯದಂತೆ ಇನ್ನು ಮಾಡಬೇಕಾದದ್ದು ಏನೂ ಇರುವುದಿಲ್ಲ.

### ಶ್ರವಣ, ಮನನ ಹಾಗೂ ನಿದಿಧ್ಯಾಸನಗಳು

ಶ್ರವಣ, ಮನನ, ನಿದಿಧ್ಯಾಸನಗಳೆಂಬ ಸಾಧನೆಗಳಿಂದ ಕ್ರಮವಾಗಿ ಅಭಾವನಾ, ಅಸಂಭಾವನಾ ಹಾಗೂ ವಿಪರೀತಭಾವನಾಗಳನ್ನು ಕಳೆದುಕೊಂಡಾಗ ಅಖಂಡೈಕರಸವಾದ ತತ್ತ್ವದ ಅಪರೋಕ್ಷಾನುಭೂತಿಯುಂಟಾಗುತ್ತದೆ ಎನ್ನುತ್ತದೆ ವೇದಾಂತ. ಬ್ರಹ್ಮಾತ್ಮೈಕ್ಯ (ಬ್ರಹ್ಮವೂ ಜೀವವೂ ಒಂದೇ)ದ ವಿಷಯವು ತಿಳಿಯದೇ ಇರುವುದು ಅಭಾವನಾ. ಕೇವಲ ಶ್ರುತಿಯ ತಾತ್ಪರ್ಯವನ್ನು ಅರಿತಾಗಲೇ ನಮಗೆ ಈ ಸತ್ಯದ ಅರಿವಾಗುವುದು. ಅಲ್ಲಿಯವರೆಗೂ ಇಂತಹ ವಿಷಯವಿದೆ ಎಂಬ ಕಲ್ಪನೆಯೂ ಇರುವುದಿಲ್ಲ. ಅದಕ್ಕೆ ಅನಾದಿಯಾದ ಅವಿದ್ಯೆಯು ನಮ್ಮನ್ನು ಮುಸುಕಿರುವುದೇ ಕಾರಣ. ಅದನ್ನು ತೆಗೆದುಹಾಕುವುದು ಈ ಶ್ರವಣ.

ಅದ್ವೈತ ಸಿದ್ಧಾಂತದ ಪ್ರತಿಪಾದಕರಲ್ಲಿ ವಾಚಸ್ಪತಿ ಮಿಶ್ರರನ್ನು ಹೊರತುಪಡಿಸಿ ಎಲ್ಲರೂ ಶ್ರವಣವೇ ಅಪರೋಕ್ಷಜ್ಞಾನಕ್ಕೆ ನೇರ ಸಾಧನವೆನ್ನುವರು.

**ಪ್ರಮೋಪಜಾಯತೇ ತಾವದಹಂ ಬ್ರಹ್ಮೇತ್ಯಲೌಕಿಕೀ।**
**ತತ್ತ್ವಮಸ್ಯಾದಿವಾಕ್ಯೇಭ್ಯಃ ಶ್ರವಣಾತ್ ಸಮನಂತರಮ್ ॥**

'ತತ್ತ್ವಮಸಿಯೇ ಮೊದಲಾದ ವಾಕ್ಯಗಳ ಶ್ರವಣವಾದ ಮರುಕ್ಷಣದಲ್ಲಿಯೇ ಅಹಂ ಬ್ರಹ್ಮಾಸ್ಮಿಯೆಂಬ ಅಲೌಕಿಕ ಪ್ರಮೆ ಹುಟ್ಟುತ್ತದೆ.' *(ಬೃಹದಾರಣ್ಯಕಭಾಷ್ಯ ವಾರ್ತಿಕಮ್ ೨.೪.೧೬೭)* ಶ್ರವಣವೆಂದರೆ, ಬರಿ ಕೇಳುವುದೆಂದಲ್ಲ. ಸುರೇಶ್ವರಾಚಾರ್ಯರು ತಮ್ಮ ಬೃಹದಾರಣ್ಯಕ ಭಾಷ್ಯ ವಾರ್ತಿಕದಲ್ಲಿ ಶ್ರವಣದ ಸ್ವರೂಪವನ್ನು ಹೇಳುತ್ತ, '**ಶ್ರುತಿಲಿಂಗಾದಿಕೋ ನ್ಯಾಯಃ ಶಬ್ದಶಕ್ತಿವಿವೇಕಕೃತ್।**' *(೨.೪.೨೧೪)* ಎನ್ನುತ್ತಾರೆ. ಅದನ್ನು ವಿವರಿಸುತ್ತ ಆನಂದಗಿರಿಗಳು, 'ಶ್ರುತಿಯೇ ಮೊದಲಾದ ಶಕ್ತಿತಾತ್ಪರ್ಯವನ್ನು ನಿರ್ಣಯಿಸುವ ನ್ಯಾಯಗಳಿಂದ ವೇದಾಂತಗಳಿಗೆ ಬ್ರಹ್ಮಾತ್ಮೈಕ್ಯದಲ್ಲಿಯೇ ತಾತ್ಪರ್ಯವೆಂದು ನಿರೂಪಿಸುವುದೇ ಶ್ರವಣ' ಎನ್ನುತ್ತಾರೆ. ಶಕ್ತಿಯೆಂದರೆ ಪದಕ್ಕೂ ಪದಾರ್ಥಕ್ಕೂ ಇರುವ ಮುಖ್ಯವಾದ ಸಂಬಂಧ. ತಾತ್ಪರ್ಯವೆಂದರೆ, *ಪದಾರ್ಥಗಳ ಸಂಬಂಧದ ಅನುಭವವನ್ನು ಅಥವಾ ಜ್ಞಾನವನ್ನು ಹುಟ್ಟಿಸುವ ವಾಕ್ಯದಲ್ಲಿರುವ ಯೋಗ್ಯತೆ* (**ತತ್ಪ್ರತೀತಿಜನನಯೋಗ್ಯತ್ವಮ್**). 'ಮನೆಯಲ್ಲಿ ಮಡಕೆ' ಎಂದು ಉಚ್ಚರಿಸಿದಾಗ ಮನೆಯೆಂಬ ಅಧಿಕರಣದಲ್ಲಿ ಮಡಕೆಯೆಂಬ ಆಧೇಯದ ಸಂಬಂಧವು ಕೇಳುವವನ ಅನುಭವಕ್ಕೆ ಬರುತ್ತದೆ. ಸಾಮಾನ್ಯವಾಗಿ ಲೋಕದಲ್ಲಿ ನಾವು ವಾಕ್ಯವನ್ನು ಉಚ್ಚರಿಸುವ ಮನುಷ್ಯನು ಏನನ್ನು ಹೇಳಲು ಬಯಸುತ್ತಾನೋ ಅದನ್ನು ತಾತ್ಪರ್ಯವೆನ್ನುತ್ತೇವೆ. ವೇದಗಳು ಯಾವುದೇ ಪುರುಷನಿಂದ ನಿರ್ಮಾಣವಾಗದ್ದರಿಂದ ಅವುಗಳ ವಾಕ್ಯಗಳ ತಾತ್ಪರ್ಯವನ್ನು ಹಾಗೆ ಹೇಳಲು ಬರುವುದಿಲ್ಲ. ತಾತ್ಪರ್ಯವನ್ನು ವ್ಯಾಖ್ಯಾನಿಸುತ್ತ ಪಂಚಪಾದಿಕಾ ವಿವರಣಕಾರರು ಹೇಳುವರು, 'ಒಂದು ಪದಾರ್ಥವನ್ನು ತಿಳಿಸಿಕೊಡುವಲ್ಲಿ ಅಂಗವಾಗಿರುವ ಶಬ್ದದ ಒಂದು ಧರ್ಮ' ಎಂದು. ಅದ್ವೈತ ಸಿದ್ಧಿಕಾರರಾದ ಮಧುಸೂದನ ಸರಸ್ವತಿಗಳು ಶ್ರವಣವನ್ನು ವ್ಯಾಖ್ಯಾನಿಸುತ್ತ ಹೇಳುವರು, '**ಸಮನ್ವಯಾಧ್ಯಾಯೋಕ್ತ ತಾತ್ಪರ್ಯ ನಿಶ್ಚಾಯಕೋಪಕ್ರಮಾದಿಯುಕ್ತ್ಯನುಸಂಧಾನಂ ಶ್ರವಣಂ**' 'ಬ್ರಹ್ಮಸೂತ್ರದ ಸಮನ್ವಯಾಧ್ಯಾಯ (ಮೊದಲ ಅಧ್ಯಾಯ)ದಲ್ಲಿ ಹೇಳಿದಂತೆ ತಾತ್ಪರ್ಯವನ್ನು ನಿಶ್ಚಯಿಸುವ ಉಪಕ್ರಮವೇ ಮೊದಲಾದ ಯುಕ್ತಿಯ ಅನುಸಂಧಾನವೇ ಶ್ರವಣ' ಎಂದು.

ಹಾಗೆ ತಾತ್ಪರ್ಯವನ್ನು ತಿಳಿಸುವ ಲಿಂಗಗಳು ಅಥವಾ ಚಿಹ್ನೆಗಳು ಯಾವುವು ಎಂದರೆ ಸಂಪ್ರದಾಯವಿದರು ಅದನ್ನು ಒಂದು ಶ್ಲೋಕದಲ್ಲಿ ತಿಳಿಸುತ್ತಾರೆ:

**ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥**

'ತಾತ್ಪರ್ಯವನ್ನು ನಿರ್ಣಯಿಸುವುದರಲ್ಲಿ ಲಿಂಗಗಳು ಈ ಆರು – ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ'. ಅಂದರೆ, ಈ ಆರು ಬಗೆಯ ಲಿಂಗಗಳು ಯಾವ ಅರ್ಥವನ್ನು ಹೇಳುವವೋ ಅದೇ ಆ ಗ್ರಂಥದ ತಾತ್ಪರ್ಯ. ಇವುಗಳನ್ನು ವಿವರಿಸಲು ಛಾಂದೋಗ್ಯೋಪನಿಷತ್ತಿನ ೬ನೆಯ ಅಧ್ಯಾಯವನ್ನು ಉದಾಹರಿಸುವುದುಂಟು. ೬.೨.೧ನೆಯ ಮಂತ್ರದಲ್ಲಿ 'ಎರಡಿಲ್ಲದ ಒಂದೇ' (**ಏಕಮೇವಾದ್ವಿತೀಯಮ್**) ಎಂಬುದಾಗಿ ಬ್ರಹ್ಮಾತ್ಮೈಕ್ಯದ ಪ್ರಕರಣ **ಆರಂಭ**ಗೊಳ್ಳುತ್ತದೆ. ಅದೇ ಉಪಕ್ರಮ. ೬.೮.೭ರಲ್ಲಿ 'ಈ ಸತ್ತೆಂಬ ಆತ್ಮನಿಂದಲೇ ಈ ಜಗತ್ತೆಲ್ಲವೂ ಆತ್ಮವುಳ್ಳದ್ದಾಗಿದೆ' (**ಐತದಾತ್ಮ್ಯಮಿದಂ ಸರ್ವಂ**) ಎಂಬುದರಿಂದ **ಕೊನೆ**ಗೊಳ್ಳುತ್ತದೆ. ಇದು ಉಪಸಂಹಾರ. ಪ್ರಕರಣದಲ್ಲಿ ಪ್ರತಿಪಾದಿಸಲ್ಪಟ್ಟ ಬ್ರಹ್ಮಾತ್ಮೈಕ್ಯವನ್ನು ಮತ್ತೆ ಮತ್ತೆ ಆವರ್ತನೆ ಮಾಡುವುದೇ **ಅಭ್ಯಾಸ.** ಒಂಬತ್ತು ಬಾರಿ 'ಅದು ನೀನೇ ಆಗಿರುವೆ' (**ತತ್ತ್ವಮಸಿ**) ಎಂಬ ಮಹಾವಾಕ್ಯವು ಪುನರಾವರ್ತನೆಗೊಂಡಿದೆ. ಬ್ರಹ್ಮಾತ್ಮೈಕ್ಯವು ಬೇರಾವುದೇ

ಪ್ರಮಾಣಗಳಿಂದ ತಿಳಿದು ಬರದೆ, ಈ ಪ್ರಕರಣದಿಂದ ಮಾತ್ರ ತಿಳಿದು ಬಂದರೆ **ಅಪೂರ್ವ**ವಾದ ವಿಷಯವಾಗುತ್ತದೆ. ಪ್ರಕರಣ ದಲ್ಲಿ ಹೇಳಿರುವ ಅಂತಹ ಜ್ಞಾನದಿಂದ ಉಂಟಾಗುವ ಫಲವು 'ಆಚಾರ್ಯವುಳ್ಳ ಅಧಿಕಾರಿ ಪುರುಷನೇ ಅದನ್ನು ಅರಿಯುವನು, ಹಾಗೆ ಅರಿತವನಿಗೆ ಶರೀರ ಬೀಳುವವರೆಗೇ ತಡ, ಬಿದ್ದ ಕೂಡಲೇ ವಿದೇಹಮುಕ್ತಿ' ಎಂದು ೬.೧೪.೨ರಲ್ಲಿ ಹೇಳಲ್ಪಟ್ಟಿದೆ. ಬ್ರಹ್ಮಜ್ಞಾನ ದಿಂದ ಬ್ರಹ್ಮಪ್ರಾಪ್ತಿಯೇ **ಫಲ**. ಪ್ರಕರಣದಲ್ಲಿ ಹೇಳಿರುವ ಜ್ಞಾನದ ಪ್ರಶಂಸೆ ಅಲ್ಲಲ್ಲಿ ಹೇಳಿದೆ. ಅದೇ **ಅರ್ಥವಾದ.** 'ಆ ಆದೇಶವನ್ನು ಕೂಡ- ಯಾವುದರಿಂದ ಅಶ್ರುತವಾದದ್ದು ಶ್ರುತವಾಗುವುದೋ, ಅಮತವಾದದ್ದು ಮತವೂ, ಅವಿಜ್ಞಾತವಾದದ್ದು ವಿಜ್ಞಾತವೂ ಆಗುವುದೋ ಅದನ್ನೂ ಕೂಡ ಕೇಳಿ ತಿಳಿದುಕೊಂಡೆಯಾ?' *(೬.೧.೩)* ಬ್ರಹ್ಮಜ್ಞಾನದ ಹೊಗಳಿಕೆಯೆಂದರೆ ಇದೇ. ಯಾವ ಬ್ರಹ್ಮಜ್ಞಾನವನ್ನು ಪಡೆದರೆ ಎಲ್ಲವನ್ನೂ ತಿಳಿದಂತೆ, ಪಡೆದಂತೆ ಆಗುವುದೋ ಅಂತಹ ಮಹಿಮೆಯುಳ್ಳದ್ದು ಈ ಬ್ರಹ್ಮಜ್ಞಾನ ಎಂಬುದಾಗಿ. ಇಂತಹ ಅರ್ಥವಾದದಿಂದ ಅದನ್ನು ಹೊಂದಲು ಪ್ರಯತ್ನಿಸಬೇಕು ಎಂದು ಪ್ರೇರಣೆಯಾಗುತ್ತದೆ. ಪ್ರಕರಣದಲ್ಲಿ ರುವ ಅದ್ವಿತೀಯ ವಸ್ತುವನ್ನು ಪ್ರತಿಪಾದಿಸುವಾಗ ಶ್ರುತಿಯೇ ಅಲ್ಲಲ್ಲಿ ನೀಡಿರುವ ಯುಕ್ತಿಗೆ **ಉಪಪತ್ತಿ**ಯೆಂದು ಹೆಸರು. 'ಹೇಗೆ, ಪ್ರಿಯನೇ, ಒಂದು ಮಣ್ಣಿನ ಹೆಂಟೆಯಿಂದ ಮಣ್ಣಿನ ಎಲ್ಲ ವಿಕಾರ ಗಳ ಜ್ಞಾನವುಂಟಾಗುವುದೋ, ವಿಕಾರ ಮತ್ತು ಹೆಸರುಗಳು ಕೇವಲ ವಾಗ್ವ್ಯವಹಾರವಷ್ಟೆ. ಮಣ್ಣೊಂದೇ ಸತ್ಯ' ಎಂದು ೬.೧.೪ ರಲ್ಲಿ 'ನಾಮ ಹಾಗೂ ವಿಕಾರಗಳನ್ನು ಹೊರತುಪಡಿಸಿದರೆ ಮೂಲವಸ್ತುವೇ ಉಳಿಯುವಂತೆ' ಎಂಬ ಯುಕ್ತಿಗಳನ್ನು ತಿಳಿಸ ಲಾಗಿದೆ. ಹೀಗೆ ಈ ಆರು ಲಿಂಗಗಳಿಂದ ವೇದಾಂತಕ್ಕೆ ಬ್ರಹ್ಮಾ ತ್ಮೈಕ್ಯಜ್ಞಾನದಲ್ಲಿಯೇ ತಾತ್ಪರ್ಯವೆಂದು ನಿಶ್ಚಯಿಸುವುದೇ ಶ್ರವಣ. ಇಲ್ಲಿ, ಶ್ರೀಮದ್ ಅಪ್ಪಯ್ಯ ದೀಕ್ಷಿತರು ತಮ್ಮ 'ಉಪಕ್ರಮ ಪರಾಕ್ರಮ'ವೆಂಬ ಗ್ರಂಥದಲ್ಲಿ ಉಪಕ್ರಮವೊಂದೇ ತಾತ್ಪರ್ಯ ವನ್ನು ನಿಶ್ಚಯಿಸಲು ಸಾಕು ಎಂಬುದಾಗಿ ಸಾಧಿಸುತ್ತಾರೆ.

## ಅದ್ವೈತ ವೇದಾಂತದಲ್ಲಿ ವಾಕ್ಯದ ಅನ್ವಯ

ತತ್ತ್ವಮಸಿಯೇ ಮೊದಲಾದ ಮಹಾವಾಕ್ಯಗಳ ಅರ್ಥ ನಿರ್ಣಯವನ್ನು ಹೇಗೆ ಮಾಡಲಾಗುತ್ತದೆ? ಮಹಾವಾಕ್ಯವೂ ವಾಕ್ಯರೂಪವಾದ್ದರಿಂದ ಒಂದು ವಾಕ್ಯವನ್ನು ಅರ್ಥಮಾಡಿಕೊಳ್ಳ ಬೇಕಾದರೆ ಮೊದಲು ಅದರಲ್ಲಿರುವ ಪದ ಪದಗಳ ಅರ್ಥವನ್ನು ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕೆ ಹೋಗುವ ಮುನ್ನ ವಾಕ್ಯ ಗಳಲ್ಲಿರುವ ಪದ ಪದಗಳ ಮಧ್ಯೆ ಇರುವ ಸಂಬಂಧವನ್ನು ವಿಶ್ಲೇ ಷಿಸೋಣ. ಅದರ ಮೂಲಕ ಲೋಕದಲ್ಲಿ ಹೇಗೆ ವಾಕ್ಯವನ್ನು ಅರ್ಥಮಾಡಿಕೊಂಡು, ವಾಕ್ಯಾರ್ಥವನ್ನು ಹೇಗೆ ಅರಿಯುವರು ಎಂಬುದಾಗಿ ನೋಡೋಣ. ಕ್ರಿಯಾ-ಕಾರಕ ***ಭೇದ*** ಇರುವ ವಾಕ್ಯ ಒಂದು ಬಗೆ. 'ಹಸುವನ್ನು ಎಳೆದುಕೊಂಡು ಬಾ' ಎಂಬಲ್ಲಿ ಹೇಗೋ ಹಾಗೆ. ಇದರಲ್ಲಿ ಕರ್ತೃ, ಕರ್ಮ ಹಾಗೂ ಕ್ರಿಯೆ ಎಲ್ಲವೂ ಬೇರೆ ಬೇರೆಯಾಗಿದ್ದು ಅವುಗಳೊಂದಿಗೆ ಸಂಬಂಧವನ್ನು ಹೇಳಲಾಗಿದೆ. ವಿಶೇಷಣ-ವಿಶೇಷ್ಯ ಹೇಳತಕ್ಕ ವಾಕ್ಯ ಇನ್ನೊಂದು ರೀತಿ. 'ನೀಲಿಬಣ್ಣದ ತಾವರೆ' ಎಂಬಲ್ಲಿ ಹೇಗೋ ಹಾಗೆ. ಇದರಲ್ಲಿ ಎರಡು ಪದಗಳೂ ಒಂದೇ ವಿಭಕ್ತಿಯಲ್ಲಿವೆ. ಪ್ರಥಮಾವಿಭಕ್ತಿ ಯಲ್ಲಿ. ನೀಲಿಬಣ್ಣದ ಹಾಗೂ ತಾವರೆ – ಈ ಎರಡು ಪದಗಳೂ ಒಂದೇ ವಸ್ತುವನ್ನು ತಿಳಿಸಿಕೊಡುತ್ತವೆ. ಶಾಸ್ತ್ರೀಯ ಭಾಷೆಯಲ್ಲಿ ಇಂತಹ ವಾಕ್ಯಗಳಿಗೆ ***ಸಂಸರ್ಗ*** ದಿಂದ ಅನ್ವಯವಾಗುವಂತಹ ವಾಕ್ಯಗಳೆನ್ನುತ್ತಾರೆ. ಆದರೆ 'ತತ್ತ್ವಮಸಿ' ಮೊದಲಾದ ಮಹಾ ವಾಕ್ಯಗಳಲ್ಲಿ ಈ ಮೇಲಿನ ಎರಡು ರೀತಿಯ ಅನ್ವಯಗಳೂ ಸಂಭವಿಸುವುದಿಲ್ಲ. ಇಲ್ಲಿ ಅಖಂಡಾರ್ಥವನ್ನೇ ತೆಗೆದುಕೊಳ್ಳಬೇಕು ಎಂಬುದು ಅದ್ವೈತ ಸಿದ್ಧಾಂತ. ಅದಕ್ಕೆ 'ಆ ಇವನೇ ದೇವದತ್ತ' ಎಂಬ ವಾಕ್ಯದ ಉದಾಹರಣೆ ನೀಡುತ್ತಾರೆ. ದೇವದತ್ತನೆಂಬ ವ್ಯಕ್ತಿ ಯನ್ನು ಆರು ತಿಂಗಳ ಹಿಂದೆ ಇನ್ನೊಂದು ಊರಿನಲ್ಲಿ ನೋಡಿ, ಈಗ ನಮ್ಮ ಮುಂದೆ ಅದೇ ದೇವದತ್ತ ಪ್ರತ್ಯಕ್ಷನಾದರೆ 'ಓಹೋ ಆ ದೇವದತ್ತನೇ ಇವನು' ಎನ್ನುತ್ತೇವೆ. ಈ ಜ್ಞಾನದಲ್ಲಿ ಕಾಲ ಹಾಗೂ ದೇಶಗಳೆರಡೂ ಬೇರೆ ಬೇರೆ. ಆದರೂ ದೇವದತ್ತ ಒಬ್ಬನೇ. ಬೇರೆ ಬೇರೆ ಕಾಲ-ದೇಶಗಳನ್ನು ಬಿಟ್ಟು ಒಬ್ಬನೇ ದೇವ ದತ್ತನನ್ನು ಗುರುತಿಸುವಂತೆ ಮಹಾವಾಕ್ಯಗಳಲ್ಲಿಯೂ ಮಾಡ ಬೇಕು. ವಾಕ್ಯವು ತಿಳಿಸಲು ಹೊರಟಿರುವ ಅಖಂಡ-ಅರ್ಥ ವನ್ನು, ಅದ್ವಿತೀಯ ವಸ್ತುವನ್ನು ಅರಿಯಬೇಕು. ಇಂತಹ ಅಖಂ ಡಾರ್ಥದಲ್ಲಿ ಲಕ್ಷ್ಯ-ಲಕ್ಷಣಭಾವ ಸಂಬಂಧವಿರುತ್ತದೆ.

ತತ್ ಎಂಬ ಪದ ಹಾಗೂ ತ್ವಮ್ ಎಂಬ ಪದಗಳು ತಿಳಿಸ ಹೊರಟಿರುವ ಅರ್ಥಗಳ ಶೋಧನೆಯನ್ನು ಮಾಡಿ ಅವೆರಡರ ಐಕ್ಯವನ್ನು ಸಾಧಿಸಬೇಕಾಗುತ್ತದೆ. ತತ್ ಎಂದರೆ ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿಯಾದ ಈಶ್ವರನೆಂದು ವ್ಯವಹರಿಸಲ್ಪಡುವ ಚೈತನ್ಯ. ತ್ವಮ್ ಎಂದರೆ ಅಲ್ಪಜ್ಞ, ಅಲ್ಪಶಕ್ತ, ಮನಸ್ಸು-ಬುದ್ಧಿ- ದೇಹಪರಿಚ್ಛಿನ್ನನಾದ ಜೀವ ಎಂದು ವ್ಯವಹರಿಸಲ್ಪಡುವ ಚೈತನ್ಯ. ಇವೆರಡಕ್ಕೂ ಐಕ್ಯವನ್ನು ಹೇಳುತ್ತದೆ ಶ್ರುತಿ. ಉಪಾಧಿಗಳೊಂದಿಗೆ ನೋಡಿದಾಗ ಅವೆರಡಕ್ಕೂ ಭೇದವಿದೆ. ಆಯಾ ಉಪಾಧಿಗಳನ್ನು ತೆಗೆದು ಹಾಕಿದರೆ ಅಖಂಡಚೈತನ್ಯ ವಸ್ತುವೊಂದೇ ಉಳಿದುಕೊಳ್ಳು ತ್ತದೆ. ಉಪಾಧಿಗಳು ಮಿಥ್ಯೆ. ಪಾರಮಾರ್ಥಿಕವಾಗಿ ಸತ್ಯವಲ್ಲ. ವ್ಯವಹಾರ ದೆಸೆಯಲ್ಲಿ ಮಾತ್ರ ಸತ್ಯ. ಇಂತಹ ವಾಕ್ಯದಲ್ಲಿ ಲಕ್ಷಣ ದಿಂದಲೇ ಅನ್ವಯ ಮಾಡಬೇಕು. ಲಕ್ಷಣದಲ್ಲಿ ಅನೇಕ ಬಗೆಯಿದ್ದು ಮಹಾವಾಕ್ಯದಲ್ಲಿ ***ಜಹದಜಹಲ್ಲಕ್ಷಣ*** (ಸ್ವಲ್ಪಭಾಗ ತ್ಯಜಿಸುವುದು ಇನ್ನುಳಿದ ಭಾಗವನ್ನು ತ್ಯಜಿಸದೆ ಇರುವುದು) ಅಥವಾ **ಭಾಗ ತ್ಯಾಗ ಲಕ್ಷಣ**ವನ್ನು ಬಳಸಲಾಗುತ್ತದೆ. 'ಅದು' ಎಂಬುದರ ವಾಚ್ಯವಾದ ಈಶ್ವರನಿಂದ ಉಪಾಧಿಗಳನ್ನು ಬಿಟ್ಟು ಚೈತನ್ಯವನ್ನು ಮಾತ್ರ ಸ್ವೀಕರಿಸುವುದು. ಹಾಗೆಯೆ, 'ನೀನು' ಎಂಬುದರ ವಾಚ್ಯ ವಾದ ಜೀವನಿಂದ ಉಪಾಧಿಗಳನ್ನು ಬಿಟ್ಟು ಚೈತನ್ಯವನ್ನು ಮಾತ್ರ ತೆಗೆದುಕೊಳ್ಳುವುದು ಈ ಲಕ್ಷಣದ ವೈಶಿಷ್ಟ್ಯ. ಇದನ್ನು ಸುರೇ

ಶ್ವರಾಚಾರ್ಯರು *(ನೈಷ್ಕರ್ಮ್ಯಸಿದ್ಧಿ)* **ಬಾಧಸಾಮಾನಾಧಿಕರಣ್ಯ**ವೆಂದೂ ಕರೆದಿದ್ದಾರೆ. ಉದಾಹರಣೆಗೆ ಕಣ್ಣಿನ ಹಾಗೂ ಮನಸ್ಸಿನ ದೋಷದಿಂದ ತಾತ್ಕಾಲಿಕವಾಗಿ ಸರ್ಪವನ್ನು ಗ್ರಹಿಸುತ್ತಿದ್ದ ವ್ಯಕ್ತಿಯನ್ನು ನೋಡಿದ ಸಮೀಪವರ್ತಿಯಾದ ಅವನ ಹಿತೈಷಿಯೊಬ್ಬ 'ಸರ್ಪವು ಹಗ್ಗವೇ' ಎಂದು ಉಚ್ಚರಿಸುತ್ತಾನೆ. ಆ ವಾಕ್ಯದಲ್ಲಿ ಎರಡೂ ಒಂದೇ ವಿಭಕ್ತಿಯಲ್ಲಿದೆ. ಇದೇ ಸಾಮಾನಾಧಿಕರಣ್ಯವೆಂದರೆ. ಆದರೆ, ಇಲ್ಲಿ ಸರ್ಪವು ಹೇಗೆ ಹಗ್ಗವಾದೀತು ಎಂದು ಕೇಳಿದರೆ, ಸರ್ಪತ್ವವನ್ನು ಬಾಧೆ ಮಾಡಿದರೆ, 'ಹಗ್ಗವೇ ಅದು ನಿಜವಾಗಿಯೂ' ಎಂದು ಹೇಳಲು ಇಂತಹ ವಾಕ್ಯಗಳನ್ನು ಬಳಸಲಾಗುತ್ತದೆ. ಇದರ ನಿಜವಾದ ಅರ್ಥ 'ನಿನಗೆ ಕಾಣುತ್ತಿರುವ ಸರ್ಪವು ಹಗ್ಗವೇ ಆಗಿರುತ್ತದೆ' ಎಂದು. ಇದೇ ಬಾಧಸಾಮಾನಾಧಿಕರಣ್ಯ. ಇದೇನೂ ಅದ್ವೈತಿಗಳ ಕಪೋಲಕಲ್ಪಿತವಲ್ಲ. ಶ್ರುತಿಯೇ ಅಲ್ಲಲ್ಲಿ ಇಂತಹ ಬಾಧಸಮಾನಾಧಿಕರಣದ ವಾಕ್ಯಗಳನ್ನು ಹೇಳಿದೆ. 'ಎಲ್ಲವೂ ಬ್ರಹ್ಮವೇ' (**ಸರ್ವಂ ಖಲ್ವಿದಂ ಬ್ರಹ್ಮ,** *ಛಾಂದೋಗ್ಯ ೩.೧೪.೧)* ಎಂಬ ವಾಕ್ಯದಲ್ಲಿ ಸಮಸ್ತ ಸೃಷ್ಟಿಯನ್ನು ಬಾಧಿಸಿ ಬ್ರಹ್ಮವನ್ನು ಪ್ರತಿಪಾದಿಸಲಾಗಿದೆ. ಅದೇ ರೀತಿ ಮಹಾವಾಕ್ಯಗಳಲ್ಲಿಯೂ ಎಂದು ತಿಳಿಯಬೇಕು.

### ಎಲ್ಲಿಯವರೆಗೂ ಶ್ರವಣ?

ಬ್ರಹ್ಮಾವಗತಿಯವರೆಗೂ ಶ್ರವಣವನ್ನು ಮತ್ತೆ ಮತ್ತೆ ಮಾಡುತ್ತಿರಬೇಕು ಎಂದು ಭಗವಾನ್ ಭಾಷ್ಯಕಾರರು ಹೇಳುತ್ತಾರೆ. ಒಂದು ಸಲ ಶ್ರವಣ ಮಾಡಿ ಜ್ಞಾನವುಂಟಾಗದೆ ಇದ್ದಲ್ಲಿ ಹಾಗೆ ಬಿಡಬಾರದು. ನಾವು ಹಿಂದೆ ನೋಡಿದಂತೆ ಚಿತ್ತಶುದ್ಧಿಗೆ ಅವಶ್ಯವಾಗಿ ಬೇಕಾದ ಬಹಿರಂಗ ಸಾಧನೆಗಳಾದ ನಿಷ್ಕಾಮಕರ್ಮ ಹಾಗೂ ಸಾಧನ ಚತುಷ್ಟಯ ಪರಿಪೂರ್ಣವಾಗಿದ್ದರೆ ಈ ಶ್ರವಣದ ಅನಂತರ ಅಪರೋಕ್ಷಾನುಭೂತಿ ಖಂಡಿತ. ಇಷ್ಟೇ ಮುಕ್ತಿಗೆ ಸಾಕಾಗುತ್ತದೆ. ಇಲ್ಲದೆ ಹೋದರೆ, ಮನಸ್ಸಿನಲ್ಲಿ ಕಲ್ಮಷ ಇನ್ನೂ ಇದ್ದರೆ ಸಾಧಕನನ್ನು ಅಸಂಭಾವನಾ ದೋಷವು ಬಾಧಿಸದೆ ಇರದು. ಅಸಂಭಾವನಾ ಎಂದರೆ ಶ್ರವಣ ಮಾಡಿರುವ ವಿಷಯದಲ್ಲಿ ಸಂಶಯ. 'ನಾನು ಬ್ರಹ್ಮವಾಗಲು ಹೇಗೆ ತಾನೆ ಸಾಧ್ಯ?', 'ಇಷ್ಟು ಚೆನ್ನಾಗಿ ಅನುಭವಕ್ಕೆ ಬರುತ್ತಿರುವ ಈ ಜಗತ್ತು ಮಿಥ್ಯೆಯಾಗಲು ಹೇಗೆ ಸಾಧ್ಯ?', 'ಈ ಇಂದ್ರಿಯ ಸಮೂಹಗಳಿಗೆ ಅನುಭವಕ್ಕೆ ಬರುತ್ತಿರುವ ಜಗತ್ತು ಬ್ರಹ್ಮವಾಗಲು ಹೇಗೆ ಸಾಧ್ಯ?' ಈ ರೂಪದ ಸಂಶಯಗಳು ಕಾಡುತ್ತವೆ. ಇವನ್ನು ನಿವಾರಿಸಿ ತತ್ತ್ವವನ್ನು ನಿಶ್ಚಯಿಸಲು ಯುಕ್ತಿಯನ್ನು ಬಳಸುವುದೇ ಮನನ. ಮನನಸ್ವರೂಪವನ್ನು ಸುರೇಶ್ವರಾಚಾರ್ಯರು '**ಆಗಮಾರ್ಥವಿನಿಶ್ಚಿತ್ಯೈ ಮಂತವ್ಯ ಇತಿ ಭಣ್ಯತೇ**' *(ಬೃಹದಾರಣ್ಯಕಭಾಷ್ಯವಾರ್ತಿಕಮ್ ೨.೪.೨೧೪)* ಎಂದು ವ್ಯಾಖ್ಯಾನಿಸಿದ್ದಾರೆ. ಆನಂದಗಿರಿಗಳು ಇದಕ್ಕೆ ವ್ಯಾಖ್ಯೆ ನೀಡುತ್ತ 'ಶ್ರುತಿಯೇ ಮೊದಲಾದವುಗಳಿಂದ ತಿಳಿದ ತತ್ತ್ವದಲ್ಲಿ ಅಸಂಭವವೇ ಮೊದಲಾದವುಗಳನ್ನು ನಿವಾರಿಸಿ ತತ್ತ್ವವನ್ನು ನಿಶ್ಚಯಿಸುವುದಕ್ಕಾಗಿ ದ್ವೈತವನ್ನು ಮಿಥ್ಯೆಯೆಂಬುದಾಗಿ ಸಾಧಿಸುವ ತರ್ಕವೇನುಂಟೋ ಅದನ್ನು ಮಾಡುವುದೇ ಮನನ' ಎಂದಿದ್ದಾರೆ. ಅಥವಾ ಮಧುಸೂದನ ಸರಸ್ವತಿಗಳು ಮನನವನ್ನು ತಮ್ಮ ಅದ್ವೈತಸಿದ್ಧಿಯ ಮೂರನೆಯ ಪರಿಚ್ಛೇದದಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ: '**ದ್ವಿತೀಯಾಧ್ಯಾಯೋಕ್ತ-ಅರ್ಥಾಸಕ್ತ ಶಂಕಾನಿವರ್ತಕಯುಕ್ತ್ಯನುಸಂಧಾನಂ ಮನನಂ**' 'ಬ್ರಹ್ಮಸೂತ್ರದ ದ್ವಿತೀಯಾಧ್ಯಾಯದಲ್ಲಿ ತಿಳಿಸಿರುವ ತತ್ತ್ವದ ವಿಷಯದಲ್ಲಿ ಇರುವ ಸಂಶಯವನ್ನು ನೀಗಿಸುವ ಯುಕ್ತಿಗಳನ್ನು ಬಳಸುವುದೇ ಮನನ.'

ಸಂಶಯಗಳನ್ನು ನಿವಾರಿಸಿಕೊಂಡಾಗಲೂ ಪೂರ್ವಜನ್ಮದ ವಾಸನೆಗಳ ಬಲದಿಂದ ವಿಪರೀತಭಾವನೆ ತಲೆದೋರುವುದು. 'ಜಗತ್ತು ಸತ್ಯವೇ, ಮಿಥ್ಯೆಯಲ್ಲ', 'ಜೀವವೂ ಬ್ರಹ್ಮವೂ ಭಿನ್ನವೇ, ಒಂದಲ್ಲ' ಎಂಬ ವಿರುದ್ಧ ಜ್ಞಾನ ಹೋಗುವುದಿಲ್ಲ. ಅದಕ್ಕಾಗಿ ನಿದಿಧ್ಯಾಸನವನ್ನು ಶ್ರುತಿ ಉಪದೇಶಿಸುತ್ತದೆ. ಅದರ ಸ್ವರೂಪವನ್ನು ಹೇಳುತ್ತ ಸುರೇಶ್ವರಾಚಾರ್ಯರು, '**ಅಪರಾಯತ್ತಬೋಧೋಽತ್ರ ನಿದಿಧ್ಯಾಸನಮುಚ್ಯತೇ।**' *(ಬೃ.ಭಾ.ವಾ. ೨.೪. ೨೧೭)* 'ಬೇರೆಯವುಗಳನ್ನು ಅವಲಂಬಿಸುವ ಜ್ಞಾನ' ಎಂದಿದ್ದಾರೆ. ಅದನ್ನು ವಿವರಿಸುವ ಆನಂದಗಿರಿಗಳು, 'ಶಮಾದಿಗಳಿಂದ ಕೂಡಿ ಶ್ರವಣ-ಮನನಗಳನ್ನು ಮಾಡಿ ವಾಕ್ಯಾರ್ಥಜ್ಞಾನದಲ್ಲಿ ಇರುವ ಅಡೆತಡೆಗಳನ್ನು ಹೋಗಲಾಡಿಸಿ ಅನಾಯಾಸವಾಗಿ ವಾಚ್ಯವಾಚಕ ಸಂಬಂಧವನ್ನು ಆಧರಿಸಿ ವಾಕ್ಯದ ಅರ್ಥವಾದ ಬ್ರಹ್ಮಾತ್ಮೈಕ್ಯವನ್ನು ಅರಿಯುವುದೇ ನಿದಿಧ್ಯಾಸನ' ಎನ್ನುತ್ತಾರೆ. ವೇದಾಂತ ಸಾರದ ಕರ್ತೃಗಳು ನಿದಿಧ್ಯಾಸನವೆಂದರೆ, 'ವಿರುದ್ಧವಾದ ದೇಹವೇ ಮೊದಲಾದ ಜಡಪದಾರ್ಥಗಳ ವಿಷಯವಿರದ ಅದ್ವಿತೀಯವಸ್ತುವೊಂದೇ ವಿಷಯವಾಗಿರುವ ಮಾನಸಿಕ ವೃತ್ತಿಯ ಪ್ರವಾಹ'ವೆನ್ನುವರು. ಪಂಚದಶೀಕಾರರು ತೃಪ್ತಿದೀಪದಲ್ಲಿ *(೧೦೫)* ಬರೆಯುತ್ತಾರೆ: 'ಉಪನಿಷತ್ತಿನ ಬ್ರಹ್ಮವಿದ್ಯೆಯನ್ನು ಬೋಧಿಸುವ ಪ್ರಕರಣದಲ್ಲಿಯೂ ಉಪಾಸನೆಗಳನ್ನು ಅಲ್ಲಲ್ಲಿ ಉಪದೇಶಿಸಿರುತ್ತದೆ. ಯಾರು ಬ್ರಹ್ಮೋಪದೇಶದ ಮುಂಚೆ ಉಪಾಸನೆಗಳ ಅನುಷ್ಠಾನ ಮಾಡಿಲ್ಲವೋ, ಅಂತಹವರು ಬ್ರಹ್ಮಾಭ್ಯಾಸವನ್ನು ಮಾಡುವುದರೊಂದಿಗೆ ಏಕಾಗ್ರತೆ ಹುಟ್ಟುತ್ತದೆ.' ಅದನ್ನು ಅವರು ತಮ್ಮ 'ಜೀವನ್ಮುಕ್ತಿವಿವೇಕ' ಎಂಬ ಗ್ರಂಥದಲ್ಲಿ *(ವಾಸನಾಕ್ಷಯನಿರೂಪಣ ಪ್ರಕರಣ)* ಹೀಗೆ ವಿವರಿಸುತ್ತಾರೆ: 'ಯಾರು ಜ್ಞಾನ ಪಡೆಯುವ ಮೊದಲೇ ಸಗುಣ ಉಪಾಸನೆಯನ್ನು ಮಾಡಿ ತಮ್ಮ ಇಷ್ಟದೇವತೆಯ ಸಾಕ್ಷಾತ್ಕಾರ ಹೊಂದಿರುವರೋ ಅವರಿಗೆ ವಾಸನಾಕ್ಷಯ ಹಾಗೂ ಮನೋನಾಶ ಚೆನ್ನಾಗಿ ಆಗಿರುವುದರಿಂದ ವಿದ್ವತ್‌ಸಂನ್ಯಾಸ ಹಾಗೂ ಜೀವನ್ಮುಕ್ತಿಗಳು ಸ್ವತಃ ಉಂಟಾಗುತ್ತವೆ. ಅವರೇ ಉತ್ತಮ ಅಧಿಕಾರಿಗಳು. ಈಗಿನ ಕಾಲದವರಾದರೋ ಸಾಮಾನ್ಯವಾಗಿ ಅಂತಹ ಉಪಾಸನೆಗಳನ್ನೇನೂ ಮಾಡಿರುವುದಿಲ್ಲ. ಕುತೂಹಲದಿಂದ ಒಮ್ಮೆಲೇ ಬ್ರಹ್ಮಜ್ಞಾನಕ್ಕಾಗಿ ಉದ್ಯತರಾಗುವರು. ತಾತ್ಕಾಲಿಕವಾಗಿ ವಾಸನಾಕ್ಷಯ ಹಾಗೂ

ಮನೋನಾಶಗಳನ್ನೂ ಗಳಿಸುವರು. ಅಷ್ಟರಿಂದಲೇ ಶ್ರವಣ, ಮನನ, ನಿದಿಧ್ಯಾಸನಗಳನ್ನು ಮಾಡುವರು. ಅವುಗಳ ದೃಢವಾದ ಅಭ್ಯಾಸದಿಂದ ಅಜ್ಞಾನ, ಸಂಶಯ, ವಿಪರ್ಯಯಗಳು ಹೊರಟು ಹೋಗಿ ತತ್ತ್ವಜ್ಞಾನವು ಪರಿಪೂರ್ಣವಾಗಿ ಉದಯವಾಗುತ್ತದೆ. ಹಾಗೆ ಉಂಟಾದ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಬಾಧಿಸುವ ಕಾರಣ ಗಳಿಲ್ಲದೆ ಇರುವುದರಿಂದಲೂ, ನಾಶವಾದ ಅಜ್ಞಾನವು ಮತ್ತೆ ಮರುಕಳಿಸಲು ಕಾರಣವಿಲ್ಲದಿರುವುದರಿಂದಲೂ ಜ್ಞಾನವು ದೃಢ ವಾಗಿರುತ್ತದೆ. ಆದರೆ, ದೃಢವಾದ ಅಭ್ಯಾಸವು ಇಲ್ಲದೆ ಇರುವುದ ರಿಂದಲೂ, ಆಗಾಗ ಭೋಗವನ್ನುಂಟು ಮಾಡುವ ಪ್ರಾರಬ್ಧಕರ್ಮ ದಿಂದಲೂ ವಾಸನಾಕ್ಷಯ ಹಾಗೂ ಮನೋನಾಶಗಳು ಹೊರಟು ಹೋಗುತ್ತವೆ.' ಈ ಧಾಟಿಯಲ್ಲಿ ಹೇಳುತ್ತ ವಿದ್ಯಾರಣ್ಯರು, 'ಆದ್ದ ರಿಂದ, ಈಗಿನ ಕಾಲದ ವಿದ್ವತ್‌ಸಂನ್ಯಾಸಿಗಳಿಗೆ ಬ್ರಹ್ಮಾತ್ಮೈಕ್ಯ ಜ್ಞಾನವು ಹಾಗೆ ಇರುತ್ತದೆ. ಆದರೆ, ವಾಸನಾಕ್ಷಯ ಮತ್ತು ಮನೋ ನಾಶಗಳನ್ನು ಪ್ರಯತ್ನದಿಂದ ಗಳಿಸಬೇಕಾಗುತ್ತದೆ' ಎನ್ನುತ್ತಾರೆ.

ಶ್ರವಣ-ಮನನಗಳೆರಡೂ ಯುಕ್ತಿಪ್ರಧಾನಗಳಾದರೆ, ನಿದಿ ಧ್ಯಾಸನವು ಏಕತತ್ತ್ವಾಭ್ಯಾಸದ ಧ್ಯಾನರೂಪವಾಗಿದೆ. ಅದರ ಲ್ಲಿಯೂ ಶ್ರವಣಕ್ಕೆ ಬೇಕಾದ ಯುಕ್ತಿಯು ತಾತ್ಪರ್ಯವನ್ನು ನಿರ್ಧರಿಸುವುದಕ್ಕೋಸ್ಕರವಾದರೆ, ಮನನದಲ್ಲಿ ಯುಕ್ತಿಯು ಸಂಶಯನಿವಾರಣೆಗೆ ಉಪಯೋಗಿಸಲ್ಪಡುತ್ತದೆ. ಸರ್ವಕರ್ಮ ಸಂನ್ಯಾಸ ಮಾಡಿ ಶಾಸ್ತ್ರಾಚಾರ್ಯರಿಂದ ಜ್ಞಾನವನ್ನು ಪಡೆದು ಅಮಾನಿತ್ವಾದಿಗಳಿಂದ ಬುದ್ಧಿವಿಶುದ್ಧಿಯನ್ನು ಹೊಂದಿ (ಈ ಮೊದಲು ಷಟ್‌ಸಂಪತ್ತಿಗಳಾದ ಶಮಾದಿಗಳು ಸರಿಯಾಗಿ ಆಗದೆ ಹೋಗಿದ್ದಲ್ಲಿ) ಕ್ಷೇತ್ರಜ್ಞ-ಪರಮಾತ್ಮರ ಐಕ್ಯತೆಯ ಜ್ಞಾನವನ್ನು ತನ್ನ ಅನುಭವಕ್ಕೆ ಪಡೆದುಕೊಂಡು ಇರುವುದೇ 'ಜ್ಞಾನನಿಷ್ಠೆ' ಯೆಂಬು ದಾಗಿ ಭಗವಾನ್ ಭಾಷ್ಯಕಾರರು ತಮ್ಮ ಗೀತಾಭಾಷ್ಯದಲ್ಲಿ *(೧೮.೫೫)* ವಿವರಿಸಿದ್ದಾರೆ. ಆ ಶ್ಲೋಕಕ್ಕಿರುವ ಮಧುಸೂದನ ಸರಸ್ವತಿಗಳ 'ಗೂಢಾರ್ಥದೀಪಿಕಾ' ಟೀಕೆಯಲ್ಲಿ ನಿದಿಧ್ಯಾಸನವನ್ನೇ ಜ್ಞಾನನಿಷ್ಠೆಯೆನ್ನುತ್ತಾರೆಂದು ತಿಳಿದುಬರುತ್ತದೆ **(ನಿದಿಧ್ಯಾಸನಾ ತ್ಮಿಕಯಾ ಜ್ಞಾನನಿಷ್ಠಯಾ)**. ಅದನ್ನೇ ನಾಲ್ಕು ವಿಧದ ಭಕ್ತಿಯಲ್ಲಿ (ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನೀ) ನಾಲ್ಕನೆಯ ಹಾಗೂ ಅತ್ಯುತ್ತಮವಾದ ಭಕ್ತಿಯೆಂದು ಭಾಷ್ಯಕಾರರು ಒತ್ತಿ ಹೇಳುತ್ತಾರೆ.

ಹೀಗೆ ಸಾಮಾನ್ಯ ಜನರು ತಿಳಿದುಕೊಳ್ಳುವಂತೆ ಶ್ರವಣವೆಂದರೆ ಕೇಳುವುದು, ಮನನವೆಂದರೆ ಮತ್ತೆ ಮತ್ತೆ ಚಿಂತಿಸುವುದು, ನಿದಿ ಧ್ಯಾಸನವೆಂದರೆ ಧ್ಯಾನ ಮಾಡುವುದು ಎಂದಲ್ಲ. ಹೀಗೆ ತಪ್ಪಾಗಿ ತಿಳಿದುಕೊಳ್ಳಲು ಸಾಧನಾ ಚತುಷ್ಟಯದ ಮಹತ್ವವನ್ನು ಅರಿಯದೆ ಇರುವುದೇ ಕಾರಣ. ಸಾಧನಾ ಚತುಷ್ಟಯದಲ್ಲಿ ಪರಿಪೂರ್ಣ ನಾಗುವುದು ಸುಲಭದ ಮಾತಲ್ಲ. ಬಹುಶಃ ಅನೇಕರಿಗೆ ಜನ್ಮಗಳೇ ಬೇಕಾಗಬಹುದು. ಹಾಗೆ ಸಾಧನಾ ಚತುಷ್ಟಯವಿರುವವನಿಗೆ ಒಂದು ಶಬ್ದವೇ ಸಾಕು, ಅವನ ಕೋಟಿ ಜನ್ಮದ ಅಜ್ಞಾನವನ್ನು ನಾಶ ಮಾಡಲು. ಇದರಿಂದಾಗಿಯೇ ಪ್ರಶ್ನೋಪನಿಷತ್ತಿನಲ್ಲಿ ಸುಕೇಶ ಭಾರದ್ವಾಜಾದಿ ಶಿಷ್ಯರು ಪಿಪ್ಪಲಾದನೆಂಬ ಆಚಾರ್ಯನ ಬಳಿಗೆ ಬಂದು ಬ್ರಹ್ಮದ ಕುರಿತಾಗಿ ಪ್ರಶ್ನಿಸಿದಾಗ 'ಇನ್ನೊಂದು ವರ್ಷ ನನ್ನ ಆಶ್ರಮದಲ್ಲೇ ಇದ್ದು ಶ್ರದ್ಧೆಯಿಂದ ಬ್ರಹ್ಮಚರ್ಯ, ತಪಸ್ಸುಗಳನ್ನು ಆಚರಿಸಿ, ನಂತರ ಪ್ರಶ್ನಿಸಿರಿ. ಒಂದು ವೇಳೆ ನನಗೆ ತಿಳಿದಿದ್ದರೆ ಉಪದೇಶಿಸುತ್ತೇನೆ' ಎನ್ನುತ್ತಾರೆ ಪಿಪ್ಪಲಾದರು. ಶ್ರವಣದ ಅಸದೃಶ ಮಹತ್ವವನ್ನು ತಿಳಿಯಬೇಕಾದರೆ ಸಾಧನಾ ಚತುಷ್ಟಯವನ್ನು ಮಾಡಿರಬೇಕು. ಈ ಕಾರಣದಿಂದಲೇ ಕಠೋಪ ನಿಷತ್ತು ಘೋಷಿಸುತ್ತದೆ: '(ಈ ಆತ್ಮತತ್ತ್ವವು) ಅನೇಕರಿಗೆ ಕೇಳುವು ದಕ್ಕೇ ಲಭ್ಯವಿಲ್ಲ; ಕೇಳಿದರೂ ಅನೇಕರು ಯಾವ ಆತ್ಮತತ್ತ್ವವನ್ನು ಅರಿಯರೋ' ಎನ್ನುತ್ತ, 'ಉಪದೇಶಿಸುವ ಆಚಾರ್ಯನೂ ನಿಪುಣನಾಗಿರಬೇಕು, ಶಿಷ್ಯನೂ ನಿಪುಣನಾಗಿರಬೇಕು' ಎಂಬ ಅಧಿಕಾರವನ್ನು ನೆನಪಿಸುತ್ತದೆ. ◆

## ಯುವಚೇತನ



### ಎಲ್ಲ ಜ್ಞಾನವೂ ನಮ್ಮೊಳಗೆ ಅಡಗಿದೆ

ಸಕಲ ವಿಧವಾದ ಜ್ಞಾನವೂ, ಅದು ಲೌಕಿಕವಾಗಿರಲಿ, ಆಧ್ಯಾತ್ಮಿಕವಾಗಿರಲಿ, ಮಾನ ವನ ಮನಸ್ಸಿನಲ್ಲಿಯೇ ಇರುತ್ತದೆ. ಅನೇಕ ಸಂದರ್ಭಗಳಲ್ಲಿ ಅದು ವ್ಯಕ್ತವಾಗದೆ ಮುಚ್ಚಿ ಹೋಗಿರುತ್ತದೆ. ಅದನ್ನು ಮುಚ್ಚಿಕೊಂಡಿರುವ ಮುಸುಕು ಮೆಲ್ಲನೆ ತೆರೆಯುತ್ತಿರುವಾಗ 'ನಾವು ಶಿಕ್ಷಣವನ್ನು ಪಡೆಯುತ್ತಿದ್ದೇವೆ' ಎಂದು ಹೇಳುತ್ತೇವೆ. ಈ ಮುಸುಕು ಹೆಚ್ಚಾಗಿ ತೆರೆದಷ್ಟೂ ಜ್ಞಾನಾಭಿವೃದ್ಧಿಯೂ ಹೆಚ್ಚುತ್ತದೆ. ಯಾವ ಮನುಷ್ಯನ ಮನಸ್ಸಿನ ಮೇಲಿನ ಮುಸುಕು ಹೆಚ್ಚಾಗಿ ತೆರೆಯುತ್ತದೆಯೋ ಆತನೇ ಜ್ಞಾನಿ. ಯಾವಾತನ ಮನಸ್ಸಿನ ಮೇಲಿನ ಮುಸುಕು ದಟ್ಟವಾಗಿರುವುದೋ ಆತನೇ ಅಜ್ಞನು, ಹೆಡ್ಡನು. ಯಾರ ಮನ ಸ್ಸಿನ ಮೇಲಿನ ಮುಸುಕು ಸಂಪೂರ್ಣವಾಗಿ ತೆರೆದು ಹೋಗಿಬಿಟ್ಟಿರುವುದೋ ಆತನೇ ಸರ್ವಜ್ಞನು. ಸರ್ವಜ್ಞರು ಆಗಿಹೋಗಿ ದ್ದಾರೆ. ಮುಂದೆಯೂ ಆಗುವರು. ಮುಂದಿನ ಕಲ್ಪಗಳಲ್ಲಿ ಲಕ್ಷಗಟ್ಟಲೆಯಾಗಿ ಆಗುವರು. ಚಕಮಕಿ ಕಲ್ಲಿನಲ್ಲಿ ಬೆಂಕಿ ಅಡಗಿರು ವಂತೆ ಜ್ಞಾನವೂ ಮನಸ್ಸಿನಲ್ಲಿ ಅಡಗಿದೆ. ಮನಸ್ಸಿಗೆ ನೀಡುವ ಸೂಚನೆಯೇ ಆ ಜ್ಞಾನವನ್ನು ಹೊರಹೊಮ್ಮಿಸುವ ಶಕ್ತಿ .

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೧, ಪು.೨೯-೩೦)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೬



ಫ್ರಾಂಕ್ ಡ್ವರಾಕ್ ಬರೆದ ಶ್ರೀಮಾತೆಯವರ ಚಿತ್ರ

ಪ್ರತಿದಿನವೂ ಅವರ ಕಾಲು ತೊಳೆದು, ಬ್ಯಾಂಡೇಜ್ ಹಾಕುವುದು ಮುಂದುವರಿಯಿತು. ಮೂರು ನಾಲ್ಕು ದಿನಗಳಲ್ಲೇ ಅದು ವಾಸಿಯಾಗಿ, ಮತ್ತೆ ಕಾಲು ತೊಳೆಯುವುದು, ಬ್ಯಾಂಡೇಜ್ ಹಾಕುವುದು ಬೇಕಾಗಲಿಲ್ಲ. ಅಷ್ಟರಲ್ಲಿ ಒಂದು ದಿನ ಶ್ರೀಮಾತೆ ನನ್ನನ್ನು ತಮ್ಮತ್ತ ಕರೆದು ಕೇಳಿದರು, ''ಜಯರಾಮಬಾಟಿಗೆ ಹೋಗಬಹುದೇ ನಿನಗೆ?'' ನಾನೆಂದೆ, ''ಯಾಕಾಗದಮ್ಮಾ?'' ಅವರು ಅಜ್ಜಿ ಹಾಗೂ ಕಾಳೀಮಾವನನ್ನು ಕರೆತರಲು ಹೇಳಿದರು. ಮರುದಿನ ರಾತ್ರಿಯ ರೈಲಿಗೇ ನಾನು ಹೋಗಬೇಕೆಂದು ನಿಶ್ಚಯವಾಯಿತು.

ಮರುದಿನ ಸಾಯಂಕಾಲ ದೇವಾಲಯದಲ್ಲಿ ಆರತಿ ನೋಡಿ, ಮತ್ತೆ ಶ್ರೀಮಾತೆಯವರ ಬಳಿಗೆ ಬಂದೆ. ಮಲಗಿ ವಿಶ್ರಾಂತಿ ಪಡೆಯುತ್ತಿದ್ದ ಅವರು ಶಿಷ್ಯನಿಗೆ ಪಾದಸೇವೆ ಮಾಡಲು ಹೇಳಿದರು. ಬಳಿಕ ಪಿಸುಗುಟ್ಟಿ ಹೇಳಿದರು, ''ತುಳಸೀಕಟ್ಟೆಯಲ್ಲಿ ನಿರ್ಮಾಲ್ಯವಿದೆ; ಅದನ್ನು ತೆಗೆದುಕೊಂಡು ಹೋಗು.'' ಜೋರಾಗಿ, ಗೋಲಾಪ್ ಮಾಳನ್ನು ಕರೆದು ಹೇಳಿದರು, ''ಆಶುಗೆ ಹಸಿವಾಗಿದೆ, ಅವನಿಗೆ ಊಟ ಬಡಿಸು.'' ಊಟ ಮಾಡಿ, ಪ್ರಣಾಮ ಸಲ್ಲಿಸಿ ಸದ್ದಿಲ್ಲದೆ ನಾನು ಹೊರಟುಬಂದೆ.

ಹೀಗೆ ಶ್ರೀಮಾತೆ ಗುಟ್ಟಾಗಿ ಆ ಕೆಲಸವನ್ನು ಮಾಡಲು ಬೇರೆ ಯಾವ ಉದ್ದೇಶವೂ ಇರಲಿಲ್ಲ ; ಸಣ್ಣತ್ತೆಗೆ ಗೊತ್ತಾಗದಿರಲಿ ಎಂದು ಮಾತ್ರ. ಆಕೆ ಹುಚ್ಚಿಯಾದ್ದರಿಂದ, ಶ್ರೀಮಾತೆ ಅವಳನ್ನಲ್ಲದೆ ಬೇರೆ ತಮ್ಮನನ್ನೋ, ತಮ್ಮನ ಹೆಂಡತಿಯನ್ನೋ ಪ್ರೀತಿಸುವುದು, ಅವರಿಗಾಗಿ ಏನಾದರೂ ಮಾಡುವುದು ಅವಳಿಗೆ ಸಹಿಸಲಾಗುತ್ತಿರಲಿಲ್ಲ. ಅಜ್ಜಿ (ಶ್ರೀಮಾತೆಯವರ ತಾಯಿ) ಮೊದಲಾದವರನ್ನು ಕರೆದುಕೊಂಡು ಬರಲು ನಾನು ಹೊರಡುವುದಕ್ಕೆ ನಾಲ್ಕು ದಿನ ಮೊದಲೇ ಗೌರಿ ಮಾ (ಶ್ರೀರಾಮಕೃಷ್ಣರ ಸಂನ್ಯಾಸಿನಿ ಭಕ್ತೆ; ಆಕೆ ಮುಂದೆ 'ಶ್ರೀಶಾರದೇಶ್ವರಿ ಆಶ್ರಮ'ವನ್ನು ಸ್ಥಾಪಿಸಿದಳು) ಪುರಿಗೆ ಬಂದಳು; ನಮ್ಮ ಬಳಗದಲ್ಲಿ ಸೇರಿಕೊಂಡಳು.

ನಾನು ವಿಷ್ಣುಪುರಕ್ಕೆ ಟಿಕೆಟ್ ತೆಗೆದುಕೊಂಡು, ಸರಿಯಾದ ಸಮಯಕ್ಕೆ ಗಾಡಿಯನ್ನೇರಿ ಕುಳಿತೆ. ವಿಷ್ಣುಪುರದಲ್ಲಿ ಇಳಿದು, ಶೇರ್ ಗಾಡಿಯಲ್ಲಿ ಕೊತುಲ್‌ಪುರ್‌ಗೆ ಹೋದೆ. ಅಲ್ಲಿಂದ ಕಾಲುನಡಿಗೆಯಲ್ಲಿ ಜಯರಾಮಬಾಟಿಗೆ ಹೋಗಿ, ಅಜ್ಜಿ ಹಾಗೂ ಕಾಳೀಮಾವನಿಗೆ ಶ್ರೀಮಾತೆಯವರ ಆದೇಶವನ್ನು, ಹಾಗೂ ಅವರನ್ನು ಪುರಿಗೆ ಕರೆದುಕೊಂಡು ಹೋಗಲು ನಾನು ಬಂದುದಾಗಿಯೂ ತಿಳಿಸಿದೆ. ಮರುದಿನ ಯಾತ್ರೆ ಹೊರಡುವುದಾಗಿ ನಿಶ್ಚಯವಾಯಿತು. ಕಾಳೀಮಾವ ಅವರ ಬೀಗರ ಮನೆ ಮಡಗೇಡ್ ಗ್ರಾಮಕ್ಕೆ ಹೋಗಿ, ಅವರ ಪತ್ನಿಗೆ ವಿಷಯ ತಿಳಿಸಿದರು. ಆಗ ಅವರ ಪತ್ನಿ ಅಲ್ಲಿದ್ದರು. ಮರುದಿನ ಹೊರಡುವ ಸಮಯ ಬೆಳಿಗ್ಗೆ ಕಾಳೀಮಾಮ ಅಜ್ಜಿಯನ್ನು ಅಲ್ಲಿಗೆ ಕರೆದುಕೊಂಡು ಹೋಗಲು ಹೇಳಿದರು. ಅವರು ಅಲ್ಲಿಂದ ಹೋಗಲು ಎತ್ತಿನ ಗಾಡಿಯ ವ್ಯವಸ್ಥೆ ಮಾಡುವುದಾಗಿಯೂ, ಗರ್ಬೆಟಾ ದಾರಿಯಾಗಿ ಹೋಗುವುದಾಗಿಯೂ ತೀರ್ಮಾನಿಸಲಾಯಿತು.

ಇತ್ತ ಸೀತಾರಾಮ್ ಘೋಷ್ ಎಂಬ ಒಬ್ಬ ಮುದುಕನು ಅಲ್ಲಿಗೆ ಬಂದು, ತನ್ನನ್ನು ಕರೆದುಕೊಂಡು ಹೋಗಲು ಇನ್ನಿಲ್ಲದಂತೆ ಅಜ್ಜಿಯನ್ನು ಒತ್ತಾಯಿಸಿದ. ತನ್ನ ಖರ್ಚನ್ನು ತಾನೇ ವಹಿಸಿ

ಕೊಳ್ಳುವುದಾಗಿ ಆತ ಹೇಳಿದ. ಅಜ್ಜಿ ಕೊನೆಗೂ ಒಪ್ಪಿದರು. ಮರುದಿನ ಅಜ್ಜಿ  ಹಾಗೂ ಸೀತಾರಾಮ ಇಬ್ಬರನ್ನು ಕರೆದುಕೊಂಡು ಪುರಿಗೆ ಹೋಗುವುದಕ್ಕಾಗಿ ಒಂದು ಗುಂಪನ್ನೇ ತಯಾರು ಮಾಡಿಬಿಟ್ಟಿದ್ದರು. ಇಲ್ಲಿ ಏನಾದರೂ ಹೇಳುವುದು ಸರಿಯಲ್ಲವೆಂದು ನಾನು ಸುಮ್ಮನಿದ್ದೆ. ಯಾತ್ರೆ ಹೊರಡುವಾಗ ಎರಡು ಎತ್ತಿನ ಗಾಡಿಗಳು ಬಂದವು, ಒಂದರಲ್ಲಿ ಅಜ್ಜಿ, ಕಾಳೀಮಾವನ ಪತ್ನಿ, ಅವರ ಇಬ್ಬರು ಮಕ್ಕಳು ಕುಳಿತರು. ಗಾಡಿಯವನ ಬಳಿ ಸೀತಾರಾಮ ಕುಳಿತ. ಇನ್ನೊಂದು ಗಾಡಿಯಲ್ಲಿ ಕಾಳೀಮಾವ, ಅವರ ಮಾವ ಹಾಗೂ ನಾನು ಕುಳಿತೆವು. ರಾತ್ರಿಯಿಡೀ ಗಾಡಿಗಳು ಸಾಗುತ್ತ, ಮರುದಿನ ಬೆಳಿಗ್ಗೆ ಗರ್ಬೆಟಾ ಸ್ಟೇಶನ್ನಿನ ಬಳಿ ಇರುವ ಹಳ್ಳಿಯನ್ನು ತಲುಪಿದೆವು. ಮಧ್ಯಾಹ್ನದ ಊಟವನ್ನು ಒಂದು ಛತ್ರದಲ್ಲಿ ಮಾಡಿ, ಟ್ರೈನ್ ಹಿಡಿದೆವು. ಮರುದಿನ ಬೆಳಿಗ್ಗೆ ಪುರಿಯನ್ನು ತಲುಪಿದೆವು.

ಮಡಾಗೇಡ್‌ನಿಂದ ಗರ್ಬೆಟಾಗೆ ಹೋಗುತ್ತಿರುವಾಗ ರಾತ್ರಿ ಹೊತ್ತು ಸಾಲವೃಕ್ಷದ ಕಾಡಿನ ನಡುವೆ ಒಂದೆಡೆ ತಿರುವಿನಲ್ಲಿ ಗಾಡಿ ತಿರುಗುವಾಗ, ಹಠಾತ್ತಾನೆ ಅಜ್ಜಿ ಕುಳಿತಿದ್ದ ಗಾಡಿ ಉರುಳಿಬಿತ್ತು. ಆಗ ಸೀತಾರಾಮನ ಮೇಲೆ ಅಜ್ಜಿ ಬಿದ್ದರು; ಅಜ್ಜಿಯ  ಮೇಲೆ ಎರಡನೇ ಮಾವ ಹಾಗೂ ಅವರ ಮಕ್ಕಳಿಬ್ಬರೂ ಬಿದ್ದುಬಿಟ್ಟರು. ಅವರೆಲ್ಲ ಗದ್ದಲವೆಬ್ಬಿಸಿದರು. ವಿಶೇಷವಾಗಿ ಅಜ್ಜಿ, 'ಸತ್ತೇ! ಸತ್ತು ಹೋದೆ!' ಎಂದು ಕಿರುಚಾಡಿದಾಗ ಎಲ್ಲರೂ ಅವರ ಬಳಿಗೆ ಓಡಿ ಹೋಗಿ ಅವರನ್ನು ಮೇಲಕ್ಕೆ ಎತ್ತಿಹಿಡಿದು, ''ಅಜ್ಜಿ, ನೀವು ಸತ್ತು ಹೋಗಲು ಬಿಡಲ್ಲ, ಶ್ರೀಮಾತೆ ಅಳುತ್ತಾರೆ..'' ಎಂದರು. ನಾವು ಕ್ಷೇತ್ರವಾಸಿಗಳ ಮಠವನ್ನು ತಲುಪುತ್ತಿದ್ದಂತೆಯೇ ನಮ್ಮನ್ನು ನೋಡಿದ ಸಣ್ಣತ್ತೆ, ನಾನು ಇದ್ದಕ್ಕಿದ್ದಂತೆ ಮಾಯವಾದುದನ್ನು ಕಂಡು ಶ್ರೀಮಾತೆಯವರನ್ನು ಇಲ್ಲಿಯ ತನಕ ನಾನಾ ಬಗೆಯಲ್ಲಿ ಪೀಡಿಸುತ್ತಿದ್ದವಳು, ಈಗ ಎಲ್ಲವನ್ನೂ ತಿಳಿದುಕೊಂಡು ಶ್ರೀಮಾತೆಯವರ ಎದುರಿಗೇ ಕೈ, ತಲೆ ಎಲ್ಲವನ್ನೂ ಅಲ್ಲಾಡಿಸುತ್ತಾ, ಗ್ರಾಮ್ಯ ಭಾಷೆಯಿಂದ ಬೈಯುತ್ತಾ, ಏನೇನೋ ಹೇಳತೊಡಗಿದಳು. ಶ್ರೀಮಾತೆ ಅದಕ್ಕೆ ಪ್ರತಿಯಾಗಿ ಹೀಗೆ ಹೇಳುವುದನ್ನು ಕೇಳಿಸಿಕೊಂಡೆ: ''ನಾನು ನಿನ್ನನ್ನು ಮಾತ್ರ ಕಟ್ಟಿಕೊಂಡು ಇರಬೇಕೆ? ಅವರೆಲ್ಲ ನನಗೆ ಏನೂ ಅಲ್ಲವೆ?''[೧]

ಅಗ್ರಹಾಯಣ ಮಾಸದಲ್ಲಿ ಪುರಿಯಲ್ಲಿ ಶ್ರೀಬಲರಾಮನ ವಿಶೇಷ ನೈವೇದ್ಯ ನಡೆಯುವುದು. ಅದರಲ್ಲಿ ಹಲವು ಬಗೆಯ ಭಕ್ಷ್ಯಭೋಜ್ಯಗಳಿರುತ್ತಿದ್ದವು. ನಾವು ಪ್ರತಿದಿನವೂ ಅಲ್ಲಿಗೆ ಹೋಗುತ್ತಿದ್ದೆವು. ಎಲ್ಲ ಜಾತಿಯವರಿಗೂ ದೇವಾಲಯದ ಪ್ರಾಂಗಣದಲ್ಲಿ ಪಂಕಾಲ್ (ತಂಗುಳನ್ನ) ಮಹಾಪ್ರಸಾದವನ್ನು ನೀಡುವುದು, ಹಾಗೂ ಅವರ ಕೈಯಿಂದ ಅದನ್ನು ಸ್ವೀಕರಿಸುವುದು ಮಂದಿರದಲ್ಲಿ ನಡೆದುಕೊಂಡು ಬಂದ ಪದ್ಧತಿಯಾಗಿತ್ತು. ಈ ಸಂಪ್ರದಾಯಕ್ಕೆ ಅನುಸಾರವಾಗಿ ಒಂದು ದಿನ ಶ್ರೀಮಾತೆ ಒಂದೆಡೆ ಕುಳಿತು ನಮಗೆಲ್ಲ ಪ್ರಸಾದ ತಿನ್ನಿಸಿದರು, ಹಾಗೂ ತಾವೂ ಸ್ವೀಕರಿಸಿದರು. ಅಷ್ಟರಲ್ಲಿ ಹಠಾತ್ತಾನೆ ಅಲ್ಲಿಗೆ ಕಲ್ಕತ್ತೆಯಿಂದ ಬಂದ ಮಾಸ್ಟರ್ ಮಹಾಶಯ ಹಾಗೂ ವರದ ಕುಮಾರ (ಮೂರನೆಯ ಮಾವ) ಕೂಡ ಅಲ್ಲಿ ಕುಳಿತು ಪ್ರಸಾದ ಸ್ವೀಕರಿಸಿದರು. ಅವರು ಜಯರಾಂಬಾಟಿಯಿಂದ ಬಂದಿದ್ದರು. ಅಜ್ಜಿಯ ಹೊರತಾಗಿ ಉಳಿದವರೆಲ್ಲ ಕೆಲವು ದಿನಗಳ ನಂತರ ಮರಳಿ ಹೋದರು.

ಪುರಿಗೆ ಬಂದ ಸಮಯದಲ್ಲಿ ಶ್ರೀಮಾತೆಯವರ ಕಾಲಿನಲ್ಲಿ ಗುಳ್ಳೆಯೆದ್ದುದರಿಂದ ಹಾಗೂ ಕಾಳೀಮಾಮ ಬಂದುದರಿಂದ, ಶ್ರೀಮಾತೆಗೆ ಇಷ್ಟುದಿನ ಪುರೀದೇವಾಲಯಕ್ಕಲ್ಲದೆ ಬೇರೆಲ್ಲಿಗೂ ಹೋಗಲಾಗಲಿಲ್ಲ. ಈಗ ಉಳಿದವರೆಲ್ಲ ಹೋದುದರಿಂದ ಇವರು ಹಲವೆಡೆ ಸುತ್ತಾಡಲಾರಂಭಿಸಿದರು. ರಾಮನ ತಾಯಿ[೨] ಹಾಗೂ ನಿತಾಯಿಯ ತಾಯಿ[೩] (ರಾಮನ ಚಿಕ್ಕಮ್ಮ) 'ಶಶಿನಿಕೇತನ'ದಲ್ಲಿ ಉಳಿದುಕೊಂಡಿದ್ದರು. ಅವರು ಬಹುತೇಕ ಪ್ರತಿದಿನವೂ ಶ್ರೀಮಾತೆಯವರ ದರ್ಶನ ಮಾಡಲು 'ಕ್ಷೇತ್ರನಿವಾಸಿಗಳ ಮಠ'ಕ್ಕೆ ಬರುತ್ತಿದ್ದರು. ಕೆಲವೊಮ್ಮೆ ಅವರು ಮಧ್ಯಾಹ್ನ ಶ್ರೀಮಾತೆಯರೊಂದಿಗೆ ತಿರುಗಾಡಲು ಹೋಗುತ್ತಿದ್ದರು.

ಪುರಿಯಲ್ಲಿದ್ದಾಗ ಶ್ರೀಮಾತೆ ಎರಡು ಬಾರಿ ಸಮುದ್ರಸ್ನಾನ ಮಾಡಿದರು. ಒಂದು ದಿನ ಅವರು ಸ್ವರ್ಗದ್ವಾರದ ಕಡೆಗೆ ಸುತ್ತಾಡಲು ಹೋಗಿದ್ದರು. ಸಾಮಾನ್ಯವಾಗಿ ಅವರು ದೇವಾಲಯದಲ್ಲಿ ಪ್ರದಕ್ಷಿಣೆ ಮಾಡುತ್ತಿದ್ದರು. ಒಂದು ದಿನ ಶ್ರೀಜಗನ್ನಾಥನ ಅಡುಗೆ ಶಾಲೆಯನ್ನು ನೋಡಿದರು. ಇನ್ನೊಂದು ದಿನ ಗುಂಡಿಚಾ ಭವನವನ್ನು ನೋಡಲು ಹೋಗಿ, ಆ ಬೃಹದಾಕಾರದ ಮಂದಿರವನ್ನೆಲ್ಲ ಸುತ್ತಾಡಿ ನೋಡಿದರು. ಅಂದೇ ಅವರು 'ಲಕ್ಷ್ಮೀಜಲಾ' ಕೂಡ ನೋಡಿದರು. ಈ ಲಕ್ಷ್ಮೀಜಲಾ ಗದ್ದೆಯ ಮಹತ್ವವೇನೆಂದರೆ, ಅದು ಜಗನ್ನಾಥ ಪ್ರಭುವಿಗೆ ಪ್ರತಿದಿನ ನೈವೇದ್ಯ ಮಾಡುವ ಸಲುವಾಗಿ ವರ್ಷದಲ್ಲಿ ಹನ್ನೆರಡು ತಿಂಗಳೂ ನವಧಾನ್ಯವನ್ನು ನೀಡುವುದು. ಅಲ್ಲಿಂದ ಬಂದ ಧಾನ್ಯದಿಂದಲೇ ಅಕ್ಕಿ ತಯಾರು ಮಾಡಿ, ನೈವೇದ್ಯದ ಅಡುಗೆ ತಯಾರಿಸಲಾಗುವುದು.

ಇನ್ನೊಂದು ದಿನ ಶ್ರೀಮಾತೆ ವಿಜಯಕೃಷ್ಣ ಗೋಸ್ವಾಮಿಯ ಸಮಾಧಿಯನ್ನು ನೋಡಲು ನರೇಂದ್ರ ಸರೋವರಕ್ಕೆ ಹೋದರು. ಅಲ್ಲಿಗೆ ಹೋಗುವಂತೆ ಗೋಸ್ವಾಮಿಯ ಮಗ ಪ್ರಾರ್ಥಿಸಿಕೊಂಡಿದ್ದ.

---

[೧] ಈ ವಿಷಯವಾಗಿ ಹೆಚ್ಚಿನ ವಿವರಗಳಿಗೆ ನೋಡಿ, 'ಶ್ರೀ ಶ್ರೀ ಶಾರದಾ ದೇವಿ', ಲೇ: ಬ್ರಹ್ಮಚಾರಿ ಅಕ್ಷಯ ಚೈತನ್ಯ ; ಹಾಗೂ 'ಶ್ರೀ ಮಾ ಶಾರದಾ ದೇವಿ', ಲೇ: ಸ್ವಾಮಿ ಗಂಭೀರಾನಂದ. *–ಸಂ.*

[೨] ಬಲರಾಮ ಬಸುವಿನ ಪತ್ನಿ, ಕೃಷ್ಣಭಾವಿನಿ ಬಸು. *(–ಸಂ.)*

[೩] ನಿತ್ಯಾನಂದ ಬಸುವಿನ ತಾಯಿ; ಸಾಧುಪ್ರಸಾದ ಬಸುವಿನ ಪತ್ನಿ ಶರತ್‌ಕುಮಾರಿ. ಸಾಧುಪ್ರಸಾದನು ಬಲರಾಮ ಬಸುವಿನ ಸಣ್ಣ ತಮ್ಮ. ಸಾಧುಪ್ರಸಾದನ ಮಗ ನಿತ್ಯಾನಂದ ಬಸುವಿನ ಪತ್ನಿಯ ವಿವಾಹಕ್ಕೆ ಮೊದಲಿನ ಹೆಸರು ಹರಿಭಾವಿನಿ ಎಂದಾಗಿತ್ತು. ಆದರೆ ಅವಳ ದೊಡ್ಡ ಮಾವನ ಹೆಸರು  ಹರಿವಲ್ಲಭ ಹಾಗೂ ಬಲರಾಮ ಬಸುವಿನ ಪತ್ನಿಯ ಹೆಸರು ಕೃಷ್ಣಭಾವಿನಿ ಎಂದಿದ್ದುದರಿಂದ, ಅವರ ಹೆಸರೊಂದಿಗೆ ಅದು ಸೇರಿಕೊಂಡು ಗೊಂದಲವಾಗುವುದರಿಂದ, ಬಸು ಕುಟುಂಬದಲ್ಲಿ ಅವಳಿಗೆ 'ಕಮಲಾಬಾಲಾ' ಎಂಬ ಹೊಸ ಹೆಸರನ್ನು ನೀಡಲಾಯಿತು. ಅದರ ಸಂಕ್ಷಿಪ್ತ ರೂಪವೇ 'ಕಮಲಾ'. ಅವಳು ಪಾಥುರಿಯಾಘಾಟಿನ ಖೇಲತ್‌ಘೋಷನ ಮಗ ರಮಾನಾಥಘೋಷನ ನಾಲ್ಕನೇ ಮಗಳು. ಅವಳ ವಿಷಯವಾಗಿ ಸ್ವಾಮಿ ಬ್ರಹ್ಮಾನಂದರು 'ದೇವಿ' ಎನ್ನುತ್ತಿದ್ದರು. ಆಕೆ ಸಣ್ಣ ವಯಸ್ಸಿನಲ್ಲಿಯೇ ತೀರಿಕೊಂಡಳು.

ಆ ಸರೋವರ ಹಾಗೂ ಅದರೊಂದಿಗೆ ಸೇರಿಕೊಂಡಿದ್ದ ಮಠವೂ ರಮಣೀಯವಾಗಿದೆ. ಶ್ರೀಶಂಕರಾಚಾರ್ಯರ ಗೋವರ್ಧನ ಮಠವನ್ನೂ ನಾವು ನೋಡಿದೆವು.

ಪುರಿಯಲ್ಲಿದ್ದ ಕೊನೆಯ ದಿನಗಳಲ್ಲಿ ಶ್ರೀಮಾತೆಯವರ ದೇಹಾರೋಗ್ಯ ಉತ್ತಮಗೊಂಡಿತ್ತು. ಆದ್ದರಿಂದ ಅವರು ಹಲವು ಕಥೆಗಳನ್ನು ಹೇಳುತ್ತ, ವಿನೋದ-ಆಹ್ಲಾದಗಳಲ್ಲಿ ಮುಳುಗಿರುತ್ತ, ಅನೇಕ ಬಗೆಯ ಗಾದೆ, ಒಗಟುಗಳನ್ನೆಲ್ಲ ಹೇಳುತ್ತ ಆನಂದಿಸಿದರು.

ಒಂದು ದಿನ ಕತೆ ಹೇಳುತ್ತ ಸ್ವಾಮೀಜಿ ಮಾಡಿದ ದುರ್ಗಾಪೂಜೆಯ ವಿಷಯ ಬಂತು. ಅವರೆಂದರು, ''ನರೇನ್‌ಗೆ ಎಂಥ ಗುರುಭಕ್ತಿ! ನನ್ನ ಹೆಸರಿನಲ್ಲಿ ಸಂಕಲ್ಪ ಮಾಡಿದ. ಅವನು ಹೇಳಿದ, 'ಶ್ರೀಮಾತೆಯವರ ಹೆಸರಿನಲ್ಲಿ ಸಂಕಲ್ಪ ಮಾಡಲಾಗುವುದು. ನಾವಾದರೋ ಕೌಪೀನಧಾರಿಗಳು. ನಮ್ಮ ಹೆಸರಿನಲ್ಲಿ ಮಾಡಲಾಗದು' ಅಂತ. ಕೇಷ್ಟೋಲಾಲ್[೪] ನನ್ನ ಬಳಿ ಇದ್ದ. ಅವನ ಮೂಲಕ ಪೂಜೆ ಮಾಡಿಸಿದ. ಶಶಿಯ (ಸ್ವಾಮಿ ರಾಮಕೃಷ್ಣಾನಂದ) ತಂದೆ ತಂತ್ರಧಾರಕನಾದ. ನನ್ನನ್ನು ಕೆಲವು ದಿನ ನೀಲಾಂಬರನ ಮನೆಯಲ್ಲಿ ತಂದು ಇರಿಸಿಕೊಂಡ.''

ಇನ್ನೊಂದು ಬಾರಿ ಹೇಳಿದರು: ''ಕಾಲಾಪಹಾಡಿನ ಕತೆ ಕೇಳಿದ್ದೀ ತಾನೆ? ಬ್ರಾಹ್ಮಣರ ಮಗ ಏನೇನು ಮಾಡಿದ! ಹಿಂದುಗಳ ದೇವದೇವತೆಗಳು, ಯಾವುದನ್ನೂ ಬಿಡಲಿಲ್ಲ, ಎಲ್ಲವನ್ನೂ ಒಡೆದು ಚೂರು ಚೂರು ಮಾಡಿಬಿಟ್ಟ!''

ಒಂದು ದಿನ ಶ್ರೀಮಾತೆ ಒಗಟು ಹೇಳುವುದನ್ನು ನೋಡಿ ನಟಿಯ ತಾಯಿ (ನಿಕುಂಜಾದೇವಿ, 'ಮ' ಅವರ ಪತ್ನಿ) ಹೇಳಿದರು: ''ಅಮ್ಮಾ, ನಿಮಗೆ ಅಷ್ಟೊಂದು ತಮಾಷೆ ಗೊತ್ತಿದೆಯಲ್ಲಾ!'' ಅದಕ್ಕೆ ಶ್ರೀಮಾತೆ ಹೇಳಿದರು: ''ನನ್ನಲ್ಲಿ ಇನ್ನೇನು ನೋಡುವೆ? ನೀನು ಠಾಕೂರರನ್ನು ನೋಡಿದ್ದೀಯಲ್ಲಾ? ಅವರು ಮಾತಾಡಿ ಮುಗಿಸಲಾರರು. ಅಷ್ಟೊಂದು ವಿಷಯಗಳು ಅವರಿಗೆ ಗೊತ್ತಿತ್ತು!''

ಮಾಘಮಾಸದಲ್ಲಿ ಶ್ರೀಮಾತೆ ಕಲ್ಕತ್ತೆಯ ಬಾಗ್‌ಬಜಾರ್ ಸ್ಟ್ರೀಟ್‌ನ ಮನೆಗೆ ಮರಳಿದರು. ಅಜ್ಜಿ ಕೂಡಾ ನಮ್ಮೊಂದಿಗೆ ಕಲ್ಕತ್ತೆಗೆ ಬಂದರು. ಮೊಮ್ಮಕ್ಕಳ ಸಂಪರ್ಕದಿಂದ ಅಜ್ಜಿಯೂ ನಮ್ಮೊಡನೆ ಹಾಸ್ಯ ಮಾತನಾಡುತ್ತಿದ್ದರು, ಮಾತನ್ನು ತಿರುಗಿಸುತ್ತಿದ್ದರು. ನಾವು ಕೂಡ ಬಿಟ್ಟುಕೊಡುತ್ತಿರಲಿಲ್ಲ. ಒಂದು ದಿನ ಅವರಿಗೆ ಬಾಗ್‌ಬಜಾರಿನ ನವೀನ ಮೈರಾನ ರಸಗುಲ್ಲ ಹಾಗೂ ಸಂದೇಶವನ್ನು ತಿನ್ನಿಸಿ, ''ಸಿಹಿತಿಂಡಿ ಹೇಗಿತ್ತು?'' ಎಂದು ಕೇಳಿದಾಗ ಅವರೆಂದರು, ''ತಮ್ಮಾ, ಇದರಲ್ಲೇನು ಸಿಹಿ ಇದೆಯಾ! ಒಂದಿಷ್ಟು ಹಸಿ ಬೆಲ್ಲ ಕೊಟ್ಟಿದ್ದರೆ ತಿಂದು ಬದುಕುತ್ತಿದ್ದೆ ನೋಡು!''

ಕೆಲವು ದಿನ ಕಲ್ಕತ್ತಾದಲ್ಲಿದ್ದು ನಂತರ, ಪ್ರಸನ್ನಕುಮಾರನ ಸ್ನೇಹಿತ ರಾಮನಾಥ ಬಾಂಡೂಜಿಯೊಂದಿಗೆ ಅಜ್ಜಿ ಜಯರಾಂಬಾಟಿಗೆ ಮರಳಿದರು.

ಶ್ರೀಮಾತೆಯವರ ಚಿಕ್ಕಪ್ಪ ನೀಲಮಾಧವ ಬಹಳ ದಿನದಿಂದ ಅಸ್ತಮಾದಿಂದ ನರಳುತ್ತಿದ್ದ. ಕೆಲವೊಮ್ಮೆ ಚೆನ್ನಾಗಿರುತ್ತಿದ್ದ, ಕೆಲವೊಮ್ಮೆ ಕಷ್ಟಪಡುತ್ತಿದ್ದ. ಇದ್ದಕ್ಕಿದ್ದಂತೆ ಅವನನ್ನು ಮಲಗಿಸಿಬಿಡಬೇಕಿತ್ತು. ಎಷ್ಟು ಚಿಕಿತ್ಸೆ ಮಾಡಿದರೂ ಅವನ ರೋಗ ವಾಸಿಯಾಗಲಿಲ್ಲ. ಕ್ರಮೇಣ ಅವನ ಕೊನೆಯ ದಿನಗಳು ಬಂದವು. ಶ್ರೀಮಾತೆ ಸ್ವತಃ ತಾವೇ ಎಷ್ಟೊಂದು ಸೇವೆ ಮಾಡಿದರೂ ಅದರಿಂದ ಏನೂ ಲಾಭವಾಗಲಿಲ್ಲ.

ಕೊನೆಯ ದಿನ ಬೆಳಗಿನಿಂದಲೇ ಅವನ ಮುಖದಲ್ಲಿ ಮೃತ್ಯು ಸಮೀಪಿಸಿದಂತೆ ಕಂಡುಬರುತ್ತಿತ್ತು. ಉಸಿರಾಟ ಕಷ್ಟವಾಗತೊಡಗಿತು. ನಾವು ಪದೇಪದೇ ಹೇಳಿದ ಮೇಲೆ ಶ್ರೀಮಾತೆ ಒಂದೊಂದು ಬಾರಿ ಎದ್ದುಹೋಗಿ ಠಾಕೂರರ ಪೂಜೆ, ನೈವೇದ್ಯ ಇವನ್ನೆಲ್ಲ ಮಾಡಿ ಮುಗಿಸಿ, ಬಂದು ಕುಳಿತುಕೊಳ್ಳುತ್ತಿದ್ದರು. ಆದರೆ ಅವರು ಚಿಕ್ಕಪ್ಪನನ್ನು ಬಿಟ್ಟು ಹೋಗಬಯಸುತ್ತಿರಲಿಲ್ಲ; ಅಲ್ಲೇ ಕುಳಿತುಕೊಳ್ಳುತ್ತಿದ್ದರು. ಸುಮ್ಮನೆ ಕೇಳುತ್ತಿದ್ದರು, ''ಈಗ ಹೇಗಿದೆ?'' ಅಂತ. ನಾವು ಒಂದೇ ಉತ್ತರ ನೀಡುತ್ತಿದ್ದೆವು, ''ವಾಸಿಯಾದೀತು ಅನ್ನಿಸುತ್ತದೆ. ಚಿಂತಿಸಬೇಕಾಗಿಲ್ಲ.'' ಆದರೆ ನಮ್ಮ ಉತ್ತರ ಸತ್ಯವಲ್ಲ, ಅವರನ್ನು ಸಮಾಧಾನಪಡಿಸಲು ಹಾಗೆ ಹೇಳುತ್ತಿದ್ದೆವು ಅಷ್ಟೆ.

ಕೊನೆಗೆ ಶ್ರೀಮಾತೆ ಊಟಮಾಡುವ ಸಮಯವಾಯಿತು. ಊಟಕ್ಕೆ ಹೋಗಲು ಅವರಿಗೆ ಮನಸ್ಸಿಲ್ಲ. ಮತ್ತೆ ಅವರನ್ನು ಸಮಾಧಾನಪಡಿಸಲು ಏನೇನೋ ಸುಳ್ಳು ಮಾತನ್ನು ಹೇಳಿ, ಅವರನ್ನು ಊಟಕ್ಕೆ ಕಳುಹಿಸಿದೆವು. ಆದರೆ ಅವರು ಅತ್ತ ಹೋದರು, ಇತ್ತ ಚಿಕ್ಕಪ್ಪ ಕೊನೆಯುಸಿರೆಳೆದ. ಆಗ ಚಿಕ್ಕಪ್ಪನ ಬಳಿ ನಾನು ಮತ್ತು ಇನ್ನೊಬ್ಬಳು ಭಕ್ತೆ ಮಾತ್ರ ಇದ್ದೆವು. ಶ್ರೀಮಾತೆ ಊಟ ಮುಗಿಸುವ ತನಕ ಸುಮ್ಮನಿರಲು ಅವಳನ್ನು ಒತ್ತಾಯಿಸಿದಾಗ, ಶ್ರೀಮಾತೆಯವರು ಊಟ ಮಾಡುವುದು ಎಲ್ಲಕ್ಕಿಂತ ಮುಖ್ಯವೆಂದು ಅರಿತ ಆಕೆ ಸುಮ್ಮನಿದ್ದಳು. ಅವಳಿಗೆ ಮತ್ತೂ ಹೇಳಿದೆ: ''ಶ್ರೀಮಾತೆ ತನ್ನ ಕಾಳೀಮೂರ್ತಿಯನ್ನು ಡಕಾಯಿತನಿಗೆ ತೋರಿಸಿದರಲ್ಲ, ಅದು ಕೇವಲ ಅವನಿಗೆ ಮಾತ್ರ ತೋರಿಸಿದರು ಅಂತೇನಲ್ಲ, ಇಂದು ನಾವೂ ನೋಡಬೇಕಾದೀತು. ನಮ್ಮ ತಲೆಯ ಮೇಲೆ ಬೇಕಾದರೆ ಖಡ್ಗವೇ ಬೀಳಬಹುದು'' ಎಂದೆ. ಈ ಮಾತನ್ನು ಹೇಳುವಷ್ಟರಲ್ಲೇ ಶ್ರೀಮಾತೆ ಕೈಬಾಯಿ ಒರೆಸಿಕೊಂಡು ಅಲ್ಲಿಗೆ ಬಂದರು. ನಾವು ನಿಶ್ಶಬ್ದವಾಗಿದ್ದುದನ್ನು ಹಾಗೂ ತಲೆತಗ್ಗಿಸಿಕೊಂಡಿದ್ದುದನ್ನು ಕಂಡು ಅವರಿಗೆ ಎಲ್ಲವೂ ತಿಳಿಯಿತು. ಅವರೆಂದರು, ''ಹಾಗಾದರೆ ಚಿಕ್ಕಪ್ಪ ಹೋಗಿಬಿಟ್ಟರೆ?'' ಶ್ರೀಮಾತೆಯವರ ಹಿಂದಿನ ಸೌಮ್ಯಮೂರ್ತಿ ಇನ್ನಿಲ್ಲ; ಕಣ್ಣುಗಳನ್ನು ಕೋರೈಸುವಂತೆ, ಹೊರಚಾಚಿದಂತೆ ನೋಡಿದರು. ನಾನು ತಲೆತಗ್ಗಿಸಿಯೇ ಇದ್ದೆ. ಅವರು ಹೇಳತೊಡಗಿದರು: ''ಆ ಕ್ಷುದ್ರ ವಸ್ತುವನ್ನು ತಿನ್ನಲು ನನ್ನನ್ನೇಕೆ ಕಳುಹಿಸಿದೆ? ಊಟವೇ ದೊಡ್ಡದಾಗಿ ಹೋಯಿತೆ? ಚಿಕ್ಕಪ್ಪನನ್ನು ಕೊನೆಗೆ ಒಂದು ಬಾರಿ ನೋಡಲೂ ಸಾಧ್ಯವಾಗಲಿಲ್ಲವೆ?'' ಎನ್ನುತ್ತ, ಕಂಪಿಸುತ್ತ ಜೋರಾಗಿ ಧ್ವನಿಮಾಡಿ ಅಳತೊಡಗಿದರು. ಅಷ್ಟರಲ್ಲಿ ಆ ಭಕ್ತೆ ಅಲ್ಲಿಂದ

[೪] ಕೃಷ್ಣಲಾಲ್ ಮಹಾರಾಜ್, ಮುಂದೆ ಸ್ವಾಮಿ ಧೀರಾನಂದ. *(-ಸಂ)*

ಹೊರಟುಹೋಗಿದ್ದಳು. ನಾನೊಬ್ಬನೇ ತಲೆಬಾಗಿಸಿಕೊಂಡಿದ್ದೆ. ಅವರು ಏನೇನೋ ಬೈಯುತ್ತಲೇ ಇದ್ದರು; ಅದೊಂದೂ ನನ್ನ ಕಿವಿಗಳನ್ನು ಪ್ರವೇಶಿಸಲೇ ಇಲ್ಲ. ಆಗ ನಾನು ಖಡ್ಗ ನನ್ನ ತಲೆಯ ಮೇಲೆ ಬೀಳುವ ನಿರೀಕ್ಷೆಯಲ್ಲೇ ಇದ್ದೆ. ಒಂದೊಂದು ಬಾರಿ ಅವರ ಅಪೂರ್ವ ಮೂರ್ತಿಯನ್ನು ನೋಡುತ್ತಿದ್ದೆ.

ಆದರೆ ಯಾಕೋ ಗೊತ್ತಿಲ್ಲ, ಆ ಮೂರ್ತಿ ಮರೆಯಾಯಿತು, ಅದೇ ಹಿಂದಿನ ಸೌಮ್ಯಮೂರ್ತಿಯೇ ಕಾಣಿಸಿಕೊಂಡಿತು. ಅಳುತ್ತಲೇ ಅವರು ಹೇಳಿದರು: ''ಮಗೂ ಆಶು, ಸ್ವಲ್ಪ ಹೊತ್ತು ಚಿಕ್ಕಪ್ಪನ ಬಳಿ ಕುಳಿತುಕೋ. ನಾನೀಗಲೇ ಬರುತ್ತೇನೆ.''

ಹಾಗೆಂದ ಅವರು ತಮ್ಮ ಕೋಣೆಗೆ ಹೋದರು. ಮರಳಿ ಬಂದು, ಶವದ ತಲೆಯ ಮೇಲೆ ಹಾಗೂ ಹೃದಯದ ಮೇಲೆ ಕರಜಪ ಮಾಡಿದರು. ಆ ಎರಡು ಸ್ಥಾನಗಳಲ್ಲಿ ನೈರ್ಮಾಲ್ಯವನ್ನಿಟ್ಟರು. ಈಗಲೇ ಸುಯೋಗವೆಂದರಿತು ನಾನೆಂದೆ,

''ದೋಷವೇನಾದರೂ ಇದ್ದರೆ ಅದು ನನ್ನದೇ, ಅಮ್ಮಾ; ಬೇರೆ ಯಾರದೂ ಅಲ್ಲ.'' ಅವರ ಮುಖವನ್ನೇ ನೊಡುತ್ತಿದ್ದೆ, ಅದೇ ಕರುಣೆಯ ನೋಟ ಅವರಲ್ಲಿತ್ತು. ಅಲ್ಲಿ ಅವರನ್ನು ಕುಳ್ಳಿರಿಸಿ, ಕೆಳ ಅಂತಸ್ತಿಗೆ ಬಂದು ನಾನು ಶರತ್ ಮಹಾರಾಜರಿಗೆ ತಕ್ಕ ವ್ಯವಸ್ಥೆ ಮಾಡಲು ಹೇಳಿ, ಮತ್ತೆ ಮೇಲಂತಸ್ತಿಗೆ ಬಂದೆ. ಕೆಳಗಡೆ ಲಲಿತ್ ❋ ಹಾಗೂ ಅವನ ಗಾಡಿಯನ್ನೂ ನೋಡಿದೆ.

ಅರ್ಧಗಂಟೆಯ ನಂತರ ಮೇಲಂತಸ್ತಿಗೆ ಬಂದ ಲಲಿತ; ನಾವಿಬ್ಬರೂ ಶವವನ್ನು ಕೆಳಗಿಳಿಸಿಕೊಂಡು ಹೋದೆವು. ಶ್ರೀಮಾತೆ ಇನ್ನಿಲ್ಲದಂತೆ ಅಳುತ್ತಿದ್ದರು. ಲಲಿತನಿಂದ ವಿಷಯ ತಿಳಿದ ಪ್ರಸನ್ನ ಮಾವ ಅಲ್ಲಿಗೆ ಬಂದರು. ಗಣೇಂದ್ರನಾಥನೂ ಬಂದು ಸೇರಿಕೊಂಡ. ನಾಲ್ಕೂ ಜನ ಚಿಕ್ಕಪ್ಪನ ಮೃತದೇಹವನ್ನು ಸ್ಮಶಾನಕ್ಕೆ (ಕಾಶೀಮಿತ್ರನ ಘಾಟ್‌ಗೆ) ಕೊಂಡೊಯ್ದೆವು. ಅಲ್ಲಿ ಅದಕ್ಕೆ ಯೋಗ್ಯವಾದ ರೀತಿಯಲ್ಲಿ ಸಂಸ್ಕಾರ ಮಾಡಲಾಯಿತು. ಪ್ರಸನ್ನ ಮಾವ ಚಿತೆಗೆ ಅಗ್ನಿಸ್ಪರ್ಶ ಮಾಡಿದರು.

ಲಲಿತ ಹಾಗೂ ನಾನು ಚಿಕ್ಕಪ್ಪನ ದೇಹವನ್ನು ಮೇಲಂತಸ್ತಿನಿಂದ ಕೆಳಕ್ಕೆ ಇಳಿಸುತ್ತಿದ್ದಾಗ ಗೋಲಾಪ್ ಮಾ ದೂರು ನೀಡಿದ್ದು ಕೇಳಿಸಿಕೊಂಡಿದ್ದೆ – ''ಅಮ್ಮಾ, ಆಶು ಶೂದ್ರನಾಗಿದ್ದುಕೊಂಡು, ಬ್ರಾಹ್ಮಣರ ಶವವನ್ನು ಮುಟ್ಟುವುದೆ?'' ಅದಕ್ಕೆ ಶ್ರೀಮಾತೆ ಉತ್ತರಿಸಿದ್ದು ಕಿವಿಗೆ ಬಿತ್ತು: ''ಯಾರು ಶೂದ್ರ? ಅವನು ಶಿಷ್ಯ. ಭಕ್ತರಿಗೆ ಜಾತಿಯಿದೆಯೇನು ಗೋಲಾಪ್?''

ಚಿಕ್ಕಪ್ಪ ತೀರಿಕೊಂಡು ನಾಲ್ಕನೆಯ ದಿನ ಶ್ರೀಮಾತೆ ಚತುರ್ಥಿಯ ಸಂಬಂಧವಾಗಿ, ಶವವನ್ನು ಹೊತ್ತ ನಾವು ಮೂವರಿಗೂ (ಪ್ರಸನ್ನ ಮಾವನಿಗೆ ಸೂತಕವಿದ್ದುದರಿಂದ ಅವರನ್ನು ಸೇರಿಸಲಿಲ್ಲ) ಊಟ ಹಾಕಿಸಿದರು. ಮೂವರಿಗೂ ಒಂದೊಂದು ಧೋತಿ ನೀಡಿದರು.

*(ಮುಂದುವರಿಯುವುದು)*

❋ ಅವನ ಹೆಸರು ಲಲಿತ್‌ಮೋಹನ್ ಚಟ್ಟೋಪಾಧ್ಯಾಯ. ಆತ ಡಿಕೆನ್ಸನ್ ಕಂಪೆನಿಯ ಸೇಲ್ಸ್‌ಮ್ಯಾನ್ ಆಗಿದ್ದ. ಈ ಗ್ರಂಥದಲ್ಲಿ ಕೆಲವಡೆ ಅವನು ಕಂಡು ಬರುತ್ತಾನೆ.



**ಶ್ರೀಮಾತೆಯವರ ಉಪದೇಶಗಳು**

ಶಿಷ್ಯ : ''ಅಮ್ಮಾ, ಈಶ್ವರ ಎನ್ನುವವನು ಒಬ್ಬನಿದ್ದರೆ ಈ ಪ್ರಪಂಚದಲ್ಲಿ ಇಷ್ಟೊಂದು ದುಃಖ, ಕಷ್ಟಗಳು ಯಾಕಿವೆ? ಅವನು ಏನು ನೋಡಿಕೊಳ್ಳುತ್ತಾನೆ? ಇವನ್ನೆಲ್ಲ ನಿವಾರಿಸಲು ಅವನಿಗೆ ಶಕ್ತಿಯಿಲ್ಲವೆ?''

ಶ್ರೀಮಾತೆ: ''ಇಡೀ ಸೃಷ್ಟಿಯೇ ಸುಖದುಃಖಗಳಿಂದ ತುಂಬಿದೆ. ದುಃಖವಿಲ್ಲದಿದ್ದರೆ ಸುಖವನ್ನು ತಿಳಿಯುವುದು ಸಾಧ್ಯವೆ? ಅಲ್ಲದೆ, ಎಲ್ಲರಿಗೂ ಸುಖವುಂಟಾಗುವುದಾದರೂ ಹೇಗೆ ಸಾಧ್ಯ? ಸೀತೆ ರಾಮನಿಗೆ, 'ನೀನು ಎಲ್ಲರ ದುಃಖ, ಕಷ್ಟಗಳನ್ನು ಏಕೆ ದೂರ ಮಾಡಲಾರೆ? ನಿನ್ನ ರಾಜ್ಯದಲ್ಲಿ ಎಷ್ಟು ಮಂದಿ ಪ್ರಜೆಗಳಿರುವರೋ ಅವರನ್ನೆಲ್ಲ ಸುಖದಲ್ಲಿರುವಂತೆ ಮಾಡು. ನೀನು ಮನಸ್ಸು ಮಾಡಿದರೆ ನಿನಗೆ ಅದು ಸಾಧ್ಯ' ಎಂದಳು. ಅದಕ್ಕೆ ರಾಮ, 'ಎಲ್ಲರಿಗೂ ಒಂದೇ ಬಾರಿಗೆ ಸುಖ ಹೇಗೆ ಉಂಟಾದೀತು?' ಎಂದ.

'ಇಲ್ಲ, ನೀನು ಮನಸ್ಸು ಮಾಡಿದರೆ ಸಾಧ್ಯ. ಯಾರಿಗೆ ಯಾವುದರ ಕೊರತೆಯಿದೆಯೋ ಅವನ್ನೆಲ್ಲ ರಾಜ್ಯದ ಕೋಶಾಗಾರದಿಂದ ಪೂರೈಸಿಬಿಡು.' 'ಸರಿ, ನೀನು ಹೇಳಿದಂತೆಯೇ ಮಾಡುತ್ತೇನೆ.'

''ಕೂಡಲೇ ಅವನು ಲಕ್ಷ್ಮಣನನ್ನು ಕರೆದು, 'ನಮ್ಮ ರಾಜ್ಯದ ಎಲ್ಲರಿಗೂ ತಿಳಿಸು, ಯಾರು ಯಾರಿಗೆ ಏನೇನು ಕೊರತೆಯಿದೆಯೋ ಅವನ್ನೆಲ್ಲ ರಾಜ್ಯದ ಕೋಶಾಗಾರದಿಂದ ಕೊಡಲಾಗುವುದು ಅಂತ ಹೇಳು' ಎಂದ. ಎಲ್ಲರೂ ಬಂದು ತಮ್ಮ ದುಃಖಗಳನ್ನು ತಿಳಿಸಿದರು. ಕೋಶಾಗಾರದಿಂದ ಮುಕ್ತವಾಗಿ ಸಂಪತ್ತನ್ನು ಹಂಚಲಾಯಿತು. ಬಹಳ ಮಂದಿ ಸುಖದಿಂದ ಕಳೆಯಲಾರಂಭಿಸಿದರು. ರಾಮನ ಮಾಯೆ ಎಂಥದು! ಶೀಘ್ರದಲ್ಲೇ ರಾಮನಿದ್ದ ಅರಮನೆಯ ಚಾವಣಿ ತೂತಾಗಿ ನೀರು ಸುರಿಯಲಾರಂಭಿಸಿತು. ಕಟ್ಟಡವನ್ನು ದುರಸ್ತಿ ಮಾಡುವವರನ್ನು ಕರೆಸಲು ಕೆಲಸದವರನ್ನು ಕಳುಹಿಸಿದರು. ಆದರೆ ಕೆಲಸದವರೆಲ್ಲಿ? ರಾಜ್ಯದಲ್ಲೆಲ್ಲೂ ಕೆಲಸದವರಿಲ್ಲ. ಕೆಲಸದವರಿಲ್ಲದೆ ಮನೆ ದುರಸ್ತಿ ಇತ್ಯಾದಿ ಕೆಲಸಗಳೆಲ್ಲ ಹಾಗೇ ಬಿದ್ದಿವೆ ಎಂದು ಪ್ರಜೆಗಳು ತಿಳಿಸಿದರು. ಆಗ ಬೇರೆ ಉಪಾಯವಿಲ್ಲದ ಸೀತೆ ರಾಮನಿಗೆ, 'ಮನೆಯೆಲ್ಲ ಸೋರುತ್ತಿದೆ, ಕಷ್ಟ ಸಹಿಸಲಾಗುತ್ತಿಲ್ಲ. ಮೊದಲು ಹೇಗಿತ್ತೋ ಹಾಗೆ ಎಲ್ಲವನ್ನೂ ಮಾಡಿಬಿಡು. ಹಾಗಿದ್ದರೆ ಮಾತ್ರ ಕೂಲಿ, ಕೆಲಸದವರೆಲ್ಲ ಸಿಗುತ್ತಾರೆ. ಎಲ್ಲರಿಗೂ ಒಂದೇ ಬಾರಿಗೆ ಸುಖವುಂಟಾಗುವುದು ಅಸಾಧ್ಯ' ಎಂದಳು. ರಾಮ 'ತಥಾಸ್ತು' ಎಂದ. ನೋಡ ನೋಡುತ್ತಿದ್ದಂತೆಯೇ ಎಲ್ಲವೂ ಮೊದಲಿನಂತಾಯಿತು. ಕೂಲಿ, ಕೆಲಸದವರು, ಮೇಸ್ತ್ರಿ ಎಲ್ಲರೂ ಸಿಗತೊಡಗಿದರು. ಆಗ ಸೀತೆ ಹೇಳಿದಳು, 'ಪ್ರಭೂ ಈ ನಿನ್ನ ಸೃಷ್ಟಿ ನಿನ್ನ ಅದ್ಭುತ ಲೀಲೆ.'

''ಯಾರೂ ಯಾವಾಗಲೂ ಸುಖವಾಗಿರಲಾರರು; ಅದೇ ರೀತಿ ಯಾರಿಗೂ ಜನ್ಮ ವಿಡೀ ದುಃಖವುಂಟಾಗದು. ಕರ್ಮಕ್ಕೆ ಅನುಸಾರವಾಗಿ ಫಲ; ಅಂತೆಯೇ ಅವನಿಗೆ ಅವಕಾಶ ಲಭಿಸುವುದು.''

ಶ್ರೀಶಾರದಾದೇವಿ ವಚನವೇದದಿಂದ

# ವೇದ ವಾಙ್ಮಯ

## (ಒಂದು ಕಿರುಪರಿಚಯ )

ಡಾ.ಕೆ.ಎಲ್.ಪ್ರಸನ್ನಾಕ್ಷೀ

**ಕೇವಲ ಭಾರತೀಯ ಸಂಸ್ಕೃತಿಯಷ್ಟೇ ಅಲ್ಲ, ವಿಶ್ವದ ಸಾಂಸ್ಕೃತಿಕ ಇತಿಹಾಸದಲ್ಲೇ ವೈದಿಕ ಸಾಹಿತ್ಯದ ಸ್ಥಾನ ತುಂಬ ದೊಡ್ಡದು. ನಮ್ಮ ಆಧ್ಯಾತ್ಮಿಕ ಪರಂಪರೆಯಲ್ಲಂತೂ ಶಿಖರಪ್ರಾಯವಾಗಿ ನಿಂತಿರುವ ವೇದವಾಙ್ಮಯದ ಸಂಕ್ಷಿಪ್ತ ಒಳನೋಟ ಇಲ್ಲಿದೆ. ಮಂಗಳೂರು ರಾಮಕೃಷ್ಣ ಮಠದಲ್ಲಿ ನೀಡಿದ ತಮ್ಮ ಪ್ರವಚನವನ್ನು ಆಧರಿಸಿ ಈ ಲೇಖನವನ್ನು ಸಿದ್ಧಪಡಿಸಿರುವ ಲೇಖಕಿ, ಮೈಸೂರು ಮಹಾರಾಣಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಸಂಸ್ಕೃತ ವ್ಯಾಸಂಗ, ಶಾಸ್ತ್ರ ಹಾಗೂ ಆಧ್ಯಾತ್ಮಿಕ ಕೃತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಅವರು ಮೈಸೂರು ಆಶ್ರಮದ ಭಕ್ತರು. ದೀರ್ಘಕಾಲದಿಂದ ಅವರು 'ವಿವೇಕಪ್ರಭ' ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ.**



ಎಲ್ಲಕ್ಕೂ ಮೂಲವಾಗಿರುವ, ಪರಾತ್ಪರ 'ಬ್ರಹ್ಮ' ವಸ್ತುವಿನಿಂದಲೇ, ಲಕ್ಷ ಲಕ್ಷ ಸಂಖ್ಯೆಯ ಜೀವಪ್ರಭೇದಗಳೂ, ಅವುಗಳಲ್ಲಿ ಅನಂತಕೋಟಿ ಚರಾಚರ ಜೀವಿಗಳಾಗಿರುವ ಪಿಂಡಾಂಡಗಳು, ಇದನ್ನೊಳಗೊಳ್ಳುವ ವಿಶ್ವಾಂಡ, ಅದನ್ನೂ ಒಳಗೊಳ್ಳುವ ಬ್ರಹ್ಮಾಂಡ, ಎಲ್ಲವೂ ವಿಕಾಸಗೊಂಡಿದೆ. 'ವೇದ' ಎಂಬುದು ಈ ಎಲ್ಲದರ ಗುಣ, ಸ್ವರೂಪ, ಸ್ವಭಾವ ಪ್ರಯೋಜನಗಳ ಅರಿವನ್ನು ಕೊಡುವಂತಹುದು. ಅಷ್ಟೇ ಅಲ್ಲದೆ – ವಿದ, ಜ್ಞಾನೇ ಲಾಭೇ ವಿಚಾರಣೇ ಚೇತನಾಖ್ಯಾನ ನಿವಸನೇಷು ಎಂಬ ಧಾತುಪಾಠದಂತೆ – **'ನಿಷ್ಕಲೋ ನಿರಂಜನೋ ನಿರ್ವಿಕಲ್ಪೋ ನಿರಾಖ್ಯಾತಶ್ಶುದ್ಧೋ ದೇವ ಏಕೋ...'** ಎಂಬಂತೆ ಶುದ್ಧವಾದ ಅವಯವಗಳಿಲ್ಲದ ಯಾವುದೇ ರೀತಿಯ ಮಲಿನತೆ/ದೋಷಗಳಿಲ್ಲದ, (ನಿರ್ದಿಷ್ಟವಾದ) ನಾಮ ರೂಪ (ಹೆಸರು ಆಕಾರ)ಗಳಿಲ್ಲದ ಪರಾತ್ಪರವಾದ 'ಪರಬ್ರಹ್ಮ' ವಸ್ತುವಿಗೆ ಸಂಬಂಧಿಸಿದ ವಿಚಾರಗಳನ್ನು ತಿಳಿದುಕೊಳ್ಳುವುದು.

(ಜ್ಞಾನೇ) ಆ ತಿಳಿವಳಿಕೆಯಿಂದ ಆ ವಸ್ತುವನ್ನು ಪಡೆದುಕೊಳ್ಳುವುದು (ಲಾಭೇ) ಅದನ್ನು ಪಡೆಯಲು ಇರುವ ಮಾರ್ಗಗಳು ಸಾಧನಗಳು ಮುಂತಾದವುಗಳ ಕುರಿತು ಚಿಂತನ ಮಂಥನ ಮಾಡುವುದು (ವಿಚಾರಣೇ), ಸದಸದ್ ವಿವೇಕದಿಂದ ನಿತ್ಯಸತ್ ಆದುದನ್ನು ವಿಭಜಿಸುವುದು(ಚೇತನಾಖ್ಯಾನ) ಕೊನೆಗೆ ಆ ಶುದ್ಧ ನಿರವಯವ ಜ್ಯೋತಿರ್ಜ್ಯೋತಿ ಪರಂಜ್ಯೋತಿಯಾಗಿ ನಾವೇ ಆಗಿಬಿಡುವುದು ಅಥವಾ ಅದರೊಡನೆ ಅದರಲ್ಲಿ ಒಂದಾಗಿ ಹೋಗುವುದು(ನಿವಸನೇ) – ಈ ಎಲ್ಲವೂ 'ವೇದ' ಎಂಬ ಪದದ

ಅರ್ಥವಾಗಿದೆ. ಇದಕ್ಕೆ 'ಛಂದ' ಎಂದೂ ಹೆಸರಿದೆ. ಎಲ್ಲವನ್ನೂ ಮುಚ್ಚುವುದು(ರಕ್ಷಿಸುವುದು) 'ಛದಿರಾವರಣೇ' ಮತ್ತು ಆನಂದಿಸುವುದು ಪರಮಾನಂದಮಯವಾಗಿಬಿಡುವುದು 'ಛದಿರಾಹ್ಲಾದೇ' ಎಂದು ಇದರ ಅರ್ಥ.

ಗ್ರಹ ನಕ್ಷತ್ರ ತಾರೆ ಕ್ಷೀರಪಥ ಸೂರ್ಯಮಂಡಲಗಳು ಮೊದಲಾದ ಕೋಟ್ಯಂತರ ಜ್ಯೋತಿಃ ಕಾಯಗಳನ್ನೊಳಗೊಂಡ ನಭೋಮಂಡಲ, ಭೂಃ, ಭುವಃ ಸುವಃ ಮಹಃ ಜನಃ ಪದಃ ಸತ್ಯಂ ಎಂಬ ನಾನಾ ಲೋಕಗಳು, ಅಲ್ಲಿರುವ ಸಮಸ್ತ ಚರಾಚರ ಜೀವಕೋಟಿಗಳು ಈ ಎಲ್ಲದರ ಹೊರಕವಚ (ಛದಿ) ಅಂತಃಸತ್ವ ಎರಡೂ ಈ 'ಪರಬ್ರಹ್ಮ'ವೇ ಆಗಿದೆ. ಈ ಎಲ್ಲದರ ಒಳಗೆ ಎಳ್ಳುಮೊನೆ (ಮುಳ್ಳುಕೊನೆ)ಯಷ್ಟು ಜಾಗವನ್ನೂ ಬಿಡದೆ ತುಂಬಿಕೊಂಡಿರುವ ಸಚ್ಚಿದಾನಂದಮಯನಾದ ಆನಂದಸ್ರೋತ(ಛದಿ)ವೂ ಇದೇ ಆಗಿದೆ.

**ಬ್ರಹ್ಮ ಬ್ರಾಹ್ಮಣ ಆತ್ಮನಾ ಅಂತರಸ್ಮಿನ್ನಾಮೇ ಲೋಕಾಃ ಅಂತರ್ವಿಶ್ವಮಿದಂ ಜಗತ್ ಬ್ರಹ್ಮೈವ ಭೂತಾನಾಂ ಜ್ಯೇಷ್ಠಮ್ ತೇನ ಕೋರ್ಹತಿ ಸ್ಪರ್ಧಿತುಮ್॥**

'ತನ್ನದೇ ವಿಕಾಸವಾದ 'ಬ್ರಾಹ್ಮ' ಮತ್ತು ಅದರ(ಬ್ರಾಹ್ಮದ) ಜಗತ್ತನ್ನೊಳಗೊಂಡ (ನಿರಂತರ ಹುಟ್ಟು-ಸಾವು ಧರ್ಮವುಳ್ಳ) ವಿಶ್ವವೂ ಈ 'ಬ್ರಹ್ಮ'ವೇ ಆಗಿದೆ. ಆದುದರಿಂದ ಇಷ್ಟು ಬೃಹತ್ತಾದ (ಭೂಮ) 'ಬ್ರಹ್ಮ' ಎಲ್ಲಕ್ಕಿಂತಲೂ ಜ್ಯೇಷ್ಠವಾದುದು, ದೊಡ್ಡದು. ಅದರೊಡನೆ (ಅದರ ಗುಣ ರೂಪ ಕ್ರಿಯ ಶಕ್ತಿ ಸಾಮರ್ಥ್ಯ ಇತ್ಯಾದಿಗಳೊಡನೆ) ಸ್ಪರ್ಧಿಸಲು ಸಮರ್ಥರಾದವರು ಯಾರೂ ಇಲ್ಲ.'

ಸಚ್ಚಿದಾನಂದದ ಮಹಾಸಾಗರ, ಎಲ್ಲಿಂದ ಎಲ್ಲಿಯವರೆಗೂ ನೋಡಿದರೂ ಕೋಟಿಸೂರ್ಯಪ್ರಭೆ, ಆದರೂ ಪ್ರಸನ್ನಮಯ, ಆನಂದ – ಆನಂದ, ಸಕ್ಕರೆಯ ಗೊಂಬೆಯಂತೆ ಎಲ್ಲಾ ಮಧುರಮಯ. ಅಂತಹ ಸಾಗರದಲ್ಲಿ ವಿರಾಜಮಾನವಾಗಿದ್ದ ಪರಂಜ್ಯೋತಿ ವಿಕಾಸಗೊಳ್ಳುವ ಸಂಕಲ್ಪವನ್ನು ಪಡೆಯಿತು. ಆಗ ಆ ಸಚ್ಚಿದಾನಂದ ಸಾಗರದ ಅಲೆಗಳಲ್ಲಿ ದೊಡ್ಡ ಕಂಪನವುಂಟಾಗಿ, ಅದು ಸುತ್ತಿ ಸುತ್ತಿ ವೃತ್ತಾಕಾರವಾಗಿ (ಬಿಂದುವಾಗಿ) ಓಂಕಾರನಾದವಾಯಿತು. ಆ (ಪ್ರಣವ) ಶಬ್ದತರಂಗದಲ್ಲಿ ಅ ಉ ಮ ಬಿಂದು ಇದ್ದು ಅವುಗಳಿಂದಲೇ ಋಗ್ವೇದ ಯಜುರ್ವೇದ ಸಾಮವೇದಗಳ ಉಗಮ ಆಯಿತು. ಬಿಂದು ಅಥರ್ವವಾಯಿತು. ಈ ವೇದ (ತರಂಗ)ಗಳಿಂದ ಈಗ ವಿಸ್ತಾರವಾಗಿ ವಿಕಾಸಗೊಂಡಿರುವ ಯಾವ ವಿಶ್ವಾಂಡ ಬ್ರಹ್ಮಾಂಡಗಳು ನಮ್ಮ ಅನುಭವಕ್ಕೆ ಬರುತ್ತಿದೆಯೋ ಅದೆಲ್ಲವೂ ಸೃಷ್ಟಿಯಾಯಿತು – ಎಂದು ವೇದದಲ್ಲಿ ಹೇಳಲಾಗಿದೆ:

**ಋಚಾಂ ಪ್ರಾಚೀ ಮಹತೀ ದಿಗುಚ್ಯತೇ । ದಕ್ಷಿಣಾಮಾಹುರ್ಯಜುಷಾಮಪಾರಾಮ್। ಅಥರ್ವಣಾಮಂಗಿರಸಾಂ ಪ್ರತೀಚೀ। ಸಾಮ್ನಾಮುದೀಚೀ ಮಹತೀ ದಿಗುಚ್ಯತೇ । ಋಗ್ಭ್ಯೋ ಜಾತಾಂ ಸರ್ವಶೋ ಮೂರ್ತಿಮಾಹುಃ । ಸರ್ವಾ ಗತಿರ್ಯಾಜುಷೀ ಹೈವ ಶಶ್ವತ್ । ಸರ್ವಂ ತೇಜಃ ಸಾಮರೂಪ್ಯಂ ಹ ಶಶ್ವತ್ । ಸರ್ವಂ ಹೇದಂ ಬ್ರಹ್ಮಣಾ ಹೈವ ಸೃಷ್ಟಮ್ ॥ ... ...**

'ಪೂರ್ವ ದಕ್ಷಿಣಾ ಪಶ್ಚಿಮ ಉತ್ತರ ದಿಕ್ಕಗಳೂ, ಬ್ರಹ್ಮ ಕ್ಷತ್ರಾದಿ ಎಲ್ಲಾ ವರ್ಣಗಳೂ ಈ ಪಿಂಡಾಂಡ ವಿಶ್ವಾಂಡ ಬ್ರಹ್ಮಾಂಡಗಳಾಗಿ ಆಕಾರ ತಳೆದಿರುವ ಎಲ್ಲಾ(ಮೂರ್ತಿ) **ಆಕಾರ**ಗಳೂ, ಸೃಷ್ಟಿ-ಕ್ರಿಯೆ, ವಿಕಾಸಗಳಿಗೆ ಸಂಬಂಧಿಸಿದ ಎಲ್ಲಾ ವಿಧ **ಕ್ರಿಯೆ**(ಗತಿ ಚಲನೆ)ಗಳೂ, ಸೃಷ್ಟವಾದವುಗಳಲ್ಲಿರುವ ಜೈವಂತಿಕೆಯನ್ನು ಸೂಚಿಸುವ **ತೇಜ**(ತಾಪ-ಶರೀರಪೋಷಕ ಅಗ್ನಿ) ಎಲ್ಲವೂ ಓಂ ಶಬ್ದ ತರಂಗ(ವೇದ)ಗಳಿಂದಲೇ ವಿಕಾಸಗೊಂಡವು' ಎಂದು – ಈ ಮಂತ್ರ ತಿಳಿಸುತ್ತದೆ.

ಇಷ್ಟೆಲ್ಲವನ್ನೂ ಒಳಗೊಳ್ಳುವ 'ವೇದವಾಙ್ಮಯ' ಎಷ್ಟು ದೊಡ್ಡದಿರಬಹುದು! ಊಹಿಸಲು ಸಾಧ್ಯವೆ? ಖಂಡಿತಾ ಅದು ಕಲ್ಪನೆಗೆ ನಿಲುಕುವಂತಹುದಲ್ಲ. ಭರದ್ವಾಜ ಎಂಬ ಒಬ್ಬನು ಸಂಪೂರ್ಣವಾಗಿ ವೇದಾಧ್ಯಯನವನ್ನು ಮಾಡಬೇಕೆಂಬ ಸಂಕಲ್ಪ ಹೊಂದಿರುತ್ತಾನೆ. ಅವನು ಒಂದು ಕ್ಷಣವನ್ನೂ ವ್ಯರ್ಥಮಾಡದೆ ಶ್ರದ್ಧೆ ನಿಷ್ಠೆ ಏಕಾಗ್ರತೆಗಳಿಂದ ಅಧ್ಯಯನ ಮಾಡುತ್ತಿರುತ್ತಾನೆ. ತನ್ನ ಈ ಗುಣಗಳಿಂದಲೇ ದೇವತೆಗಳಿಂದ ಮೂರು ಆಯಸ್ಸನ್ನು ವರವಾಗಿ ಪಡೆದು ನಿರಂತರ(ಹಗಲು-ರಾತ್ರಿ) ಅಭ್ಯಾಸಮಾಡುತ್ತಾನೆ. ಆದರೂ ಮೂರನೆಯ ಆಯಸ್ಸಿನ ಕೊನೆಗೂ ಅವನು ಈ ಮಹಾಸಾಗರದಲ್ಲಿ ಅಭ್ಯಾಸಮಾಡಿ ಪೂರೈಸಿದುದು ಕೇವಲ ಮೂರು ಹಿಡಿಯಷ್ಟು ಭಾಗವನ್ನು ಮಾತ್ರ – ಎಂದು ತಿಳಿಸುವ ತೈತ್ತಿರೀಯ ಆರಣ್ಯಕದ ಕಾಠಕಪ್ರಶ್ನದ ಈ ಉಪಾಖ್ಯಾನ ಇದಕ್ಕೆ ನಿದರ್ಶನ.

ಅಧ್ಯಯನದ ಅನುಕೂಲಕ್ಕಾಗಿ ಈ ವೇದವಾಙ್ಮಯವನ್ನು ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದ ಎಂದು ನಾಲ್ಕು ವಿಧವಾಗಿ ವಿಂಗಡಿಸಲಾಗಿದೆ. ಒಂದೊಂದು ವೇದದಲ್ಲೂ ಸಂಹಿತಾ ಬ್ರಾಹ್ಮಣ ಆರಣ್ಯಕ ಉಪನಿಷತ್ ಎಂದು ವಿಭಾಗಗಳಿವೆ. ಮೊದಲಿಗೆ ಈ ವೇದವಾಙ್ಮಯ ಅಖಂಡವಾಗಿ ಒಂದೇ ಆಗಿದ್ದಿತು. ಮನುಷ್ಯನ ಆಯುಸ್ಸಿನ ಅವಧಿ ಮತ್ತು ಅವನ ಮೆದುಳಿನ ಗ್ರಹಣ ಧಾರಣ ಮೇಧಾಶಕ್ತಿ ಕುಂಠಿತವಾಗುತ್ತಾ ಬರುತ್ತಿದ್ದಂತೆ, ವ್ಯಕ್ತಿಗತ ಸಂಕಲ್ಪ ವಿಕಾಸ ಶ್ರೇಯಸ್ಸು ಪ್ರೇಯಸ್ಸು ಕಾಮನೆಗಳಿಗನುಗುಣವಾಗಿ ಈ ವಾಙ್ಮಯವನ್ನು ವಿಭಾಗ ಮಾಡಬೇಕಾಗಿ ಬಂದಿತೆಂದು ಶಾಸ್ತ್ರಗಳು ತಿಳಿಸುತ್ತವೆ. ಈ ಕಾರಣದಿಂದಲೇ ಇರಬಹುದು ನಾಲ್ಕು ವೇದಗಳಲ್ಲಿರುವ ಶೇಕಡಾ ೬೦ ರಿಂದ ೮೫ ಮಂತ್ರಗಳು ಸಮಾನವಾಗಿವೆ. ಕೇವಲ ಉಚ್ಚಾರಣಾ ಕ್ರಮದಲ್ಲಿ ಸ್ವರ ವಿಸ್ತಾರ ಪ್ರಯೋಗದಲ್ಲಿ ವ್ಯತ್ಯಾಸವಿದೆ ಅಷ್ಟೆ. ಯಾರಿಗೆ ಹೇಗೆ ಎಷ್ಟು ಏನು ಎಲ್ಲಿ ಯಾವ ರೀತಿ ತಲುಪಬೇಕೋ ಅದರಂತೆ ಉಚ್ಚಾರ, ಸ್ವರಗಳ ಸಂಚಾರ, ಇದೆ. ಇಲ್ಲೇ ಹತ್ತಿರದಲ್ಲಿರುವ ವಸ್ತು/ವ್ಯಕ್ತಿ ಅನ್ನು ಕೂಗು ಮುಟ್ಟಬೇಕಾದರೆ ಮೆಲುದನಿ (ಅನುದಾತ್ತ) ಸಾಕು, ಹಲವು ಕೈಯಳತೆಯಷ್ಟು ದೂರದಲ್ಲಿದ್ದರೆ ಸ್ವಲ್ಪ

ಏರುಸ್ವರ (ಉದಾತ್ತ)ದ ಅಗತ್ಯ ಬೀಳುತ್ತದೆ. ಸ್ಥಳದ ವ್ಯಾಪ್ತಿಯಿಂದ ಸ್ವಲ್ಪ ಹೆಚ್ಚು ದೂರದ ವ್ಯಾಪ್ತಿಯಲ್ಲಿರುವ ವ್ಯಕ್ತಿ/ವಸ್ತುವನ್ನು ಧ್ವನಿ ತರಂಗ ಮುಟ್ಟಬೇಕಾದರೆ ಹೆಚ್ಚು ಏರು ಸ್ವರವಿದ್ದು ಅದರಲ್ಲಿ ಸ್ವರಗಳ ಏರಿಳಿತ (ಉದಾತ್ತ+ಅನುದಾತ್ತ ಮಿಶ್ರಣ) ಇರಬೇಕಾಗುತ್ತದೆ. ಹೀಗೆ ಆಯಾ ವಿಶಿಷ್ಟ ಹಿನ್ನೆಲೆಯ ಕಾರಣ ಸ್ವರ ಹಾಗೂ ಉಚ್ಚಾರಗಳಲ್ಲಿ ಭೇದ. 'ಅರ್ಥ'(ಅಂದರೆ ಶಬ್ದದಿಂದ ನಾವು ಹೊಂದುವ ತಿಳಿವಳಿಕೆ ಅನುಭವ)ವನ್ನು ತಲುಪಲು ಅಗತ್ಯವಾದ stress, force, effort, pressure, precision ಇವುಗಳನ್ನು ಅವಲಂಬಿಸಿ 'ಶಬ್ದ' ಇರುತ್ತದೆ. ಗಮ್ಯವನ್ನನುಸರಿಸಿ ಈ ಶಬ್ದದ ಭೇದವಿದೆ.

ಮೈಸೂರಿನ ಆಕಾಶವಾಣಿಯಿಂದ ಬಿತ್ತರವಾಗುವ ಶಬ್ದತರಂಗ ಮೈಸೂರಿಗೆ ಮಾತ್ರ ಸೀಮಿತವಾಗುವುದಾದರೆ ಒಂದು ಅಳತೆ (೧೦೦.೬ ಮೆಗಾಹರ್ಟ್ಸ್) ಸಾಕು. ಆದರೆ ಅದೇ ಬೆಂಗಳೂರು ಮಂಗಳೂರು ಧಾರವಾಡ ಹೀಗೆ ವಿವಿಧ ಜಾಗಗಳನ್ನೂ ತಲಪಬೇಕು ಎನ್ನುವುದಾದರೆ ಹೆಚ್ಚು ಶಕ್ತಿಶಾಲೀ ಪ್ರಬಲ ತರಂಗಾಂತರಗಳಲ್ಲಿ ಬಿತ್ತರ ಮಾಡಬೇಕಾಗುತ್ತದೆಯಲ್ಲವೆ? ಅದರಂತೆಯೇ ಪ್ರಸಾರವಾಗಬೇಕಾದ ಜ್ಞಾನ ಸ್ವೀಕರಿಸಬೇಕಾದ ವ್ಯಕ್ತಿಯ ಮೇಧೆಯ ಸಾಮರ್ಥ್ಯ ತೋರಬೇಕಾದ/ತಲುಪಬೇಕಾದ ಅರ್ಥ – ವಸ್ತು/ವ್ಯಕ್ತಿ ಇತ್ಯಾದಿ ಅನೇಕ ಅಂಶಗಳು ಮಂತ್ರಗಳ ಉಚ್ಚಾರದ ವಿಷಯದಲ್ಲಿ ಅಡಕವಾಗಿವೆ.

ನಾಲ್ಕೂ ವೇದಗಳು ಪ್ರತಿಪಾದಿಸುವುದು ಪರಬ್ರಹ್ಮ ಮತ್ತು ಅದರಿಂದ ವಿಕಾಸಗೊಂಡ ಬ್ರಹ್ಮಾಂಡವನ್ನೇ ಆದರೂ ಒಂದೊಂದು ವೇದ ಒಂದೊಂದು ರೀತಿಯ ವೈಶಿಷ್ಟ್ಯವನ್ನು ಹೊಂದಿದೆ. ಋಗ್ವೇದದಲ್ಲಿ ಇಂದ್ರ ವರುಣ ಮಿತ್ರ ಅಗ್ನಿ ಸವಿತೃ ಉಷಸ್, ರಾತ್ರಿ, ಮಂಡೂಕ (ಕಪ್ಪೆ) ಕಿತವ (ಜೂಜುಕೋರ) ಮೊದಲಾದವರಿಗೆ ಸಂಬಂಧಿಸಿದ ಸೂಕ್ತಗಳಿವೆ. '**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ**' ಎಂದು ಆರಂಭವಾಗುವ ಅಂಭೃಣ ಋಷಿಯ ಮಗಳಾದ ವಾಕ್‌ಳಿಂದ ಅಭಿವ್ಯಕ್ತವಾದ ಆಂಭೃಣೀ ಸೂಕ್ತ ವಿಶ್ವತತ್ತ್ವ ವಿಕಾಸದ ವಿವಿಧ ಮಜಲುಗಳಲ್ಲಿ ರೂಪ ತಳೆದು ಕಾರ್ಯನಿರ್ವಹಿಸುವ ವಿವಿಧ ದೇವತೆಗಳ ಸ್ವರೂಪವನ್ನು ವಿವರಿಸುತ್ತಾ 'ಅಹಂ' ತತ್ತ್ವವೇ ಹೇಗೆ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾಗಿದೆ ಎಂಬುದನ್ನೂ ಬ್ರಹ್ಮತತ್ತ್ವದ ರಹಸ್ಯವನ್ನೂ ಆಕೆ ಅನುಭವಿಸಿದ ಪರಿಯನ್ನು ಸುಂದರವಾಗಿ ನಿರೂಪಿಸುತ್ತದೆ. *(ಇಷ್ಟು ವ್ಯಾಪಕವಾದ 'ಅಹಂ' ತತ್ತ್ವವನ್ನು ಇಷ್ಟು ಸಣ್ಣ ಶರೀರದ ನಖ-ಶಿಖಾಂತಕ್ಕೆ ಸೀಮಿತಗೊಳಿಸಿ ಅದರ ಅಳತೆ(ಮಾನ)ಯನ್ನು ತಪ್ಪಾಗಿ(ಅಪ) ಮಾಡುವ, ನಾವು ಯಾರಿಂದಲೋ ನಮಗಾದ ಸಣ್ಣ ಪುಟ್ಟ ಪ್ರತಿಕ್ರಿಯೆಗಳಿಂದ ಮಾನಾಪಮಾನ ಕೀರ್ತಿ ಅಪಕೀರ್ತಿಗಳನ್ನು ಭಾವಿಸಿ ಹಿಗ್ಗುತ್ತಾ-ಕುಗ್ಗುತ್ತಾ ಜೀವನ ನಡೆಸುತ್ತೇವೆ. ಇಂತಹ ಹಿಗ್ಗುವ ಕುಗ್ಗುವ ಸಂದರ್ಭಗಳಲ್ಲಿ ಈ ಸೂಕ್ತ ನಮ್ಮ ನೆನಪಿಗೆ ಬರಬೇಕು. ವಿಶೇಷವಾಗಿ ಕುಗ್ಗುವಿಕೆಯಿಂದ ಬದುಕನ್ನೇ ಹಾಳು ಮಾಡಿಕೊಳ್ಳುವ ಸಂದರ್ಭದಲ್ಲಿ ಈ ಸೂಕ್ತ ಪರಮ ಸಹಾಯಕ.)* ಅದು ಸರಿ, ಜೂಜುಕೋರನಿಗೂ ಸೂಕ್ತವೆ? ಎಂದರೆ ವಿಶ್ವದಲ್ಲಿ ಜೂಜುಕೋರನಲ್ಲದವನು ಯಾರು? ಒಂದರ ಆಸೆಗೆ ಬೇರೆಲ್ಲವನ್ನೂ ಒತ್ತೆಯಿಡಲು ಸಿದ್ಧನಿರುವವನು ಜೂಜುಕೋರ. ಶ್ರೀರಾಮಕೃಷ್ಣರು ಹೇಳುವಂತೆ, ಈ ಜಗದಲ್ಲಿ ಪ್ರತಿಯೊಬ್ಬರೂ ಒಂದೊಂದು ರೀತಿಯ ಹುಚ್ಚರು, ಒಂದೊಂದಕ್ಕೂ ದಾಸರು. ಒಂದೊಂದರ ಬೆನ್ನು ಹತ್ತಿ ಜೂಜುಕೋರನಂತೆ ಅದಕ್ಕಾಗಿ ಬೇರೆ ಎಲ್ಲವನ್ನೂ ಕಳೆದುಕೊಳ್ಳಲು ಸಿದ್ಧರಾಗಿರುವವರು, ವಿಚಾರ ಮೂಢರು. ಇದನ್ನರಿತು ಲೌಕಿಕವಾದ ಯಾವುದೊಂದಕ್ಕೂ ದಾಸರಾಗಬಾರದೆಂದು ಎಚ್ಚರಿಕೆಯ ಕರೆಘಂಟೆಯನ್ನು ಆ ಸೂಕ್ತ ನೀಡುತ್ತದೆ.

ಋಗ್ವೇದ ಶಾಂತಿ, ಸೌಭಾಗ್ಯ, ಆರೋಗ್ಯ, ಸಮೃದ್ಧಿ, ಸೂಕ್ಷ್ಮ ಶರೀರ, ದೈವೀದ್ವಾರ, ಭಾವಾತೀತತೆ, ವಿಶ್ವಾತ್ಮಕತೆ, ಏಕತೆ ಮುಂತಾದ ಅನೇಕ ತತ್ತ್ವಗಳನ್ನು ಸಾರುವ ಮಂತ್ರಗಳನ್ನು ಒಳಗೊಂಡಿದೆ. '**ಸಂಗಚ್ಛಧ್ವಂ ಸಂವದಧ್ವಂ ಸಂ ವೋ ಮನಾಂಸಿ ಜಾನತಾಮ್ ... ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ...**' ಎಂಬ ಸರ್ವಸಮತೆಯನ್ನು ಸೌಹಾರ್ದವನ್ನೂ ಸನ್ಮಂಗಳವನ್ನೂ ಸಾರುವ ಈ ವೇದದ ಕೊನೆಯ ಮಂತ್ರ ಸಾಕಷ್ಟು ಪ್ರಸಿದ್ಧವಾಗಿದೆ. ಇಂತಹ ಮಂತ್ರತತ್ತ್ವಾರ್ಥಗಳನ್ನು ತಮ್ಮ ಹೃದಯದಲ್ಲಿ ಅನುಭವಿಸಿದ ಅನೇಕ ಮಂತ್ರದ್ರಷ್ಟ್ರಿಯರನ್ನು(ಋಷೀಕೆಯರನ್ನು) ಹೊಂದಿರುವುದೂ ಈ ವೇದದ ಒಂದು ವೈಶಿಷ್ಟ್ಯವೇ. ಉದಾಹರಣೆಗೆ – ಆಂಭೃಣೀ, ವಿಶ್ವಾವರ, ವಸುಕ್ರಪತ್ನೀ, ಸುರಮಾ, ಶಚೀಂದ್ರಾಣೀ, ಅದಿತಿ.

**ಯಜುರ್ವೇದ:**

ಕಲ್ಲು ಮುಳ್ಳು ಗಿಡ ಪೊದೆ ಪಾಚಿ ಹುಲ್ಲು ಕೊಚ್ಚೆ ಕಳ್ಳ ಕಳ್ಳರನಾಯಕ ದರೋಡೆಕೋರ ಯಜ್ಞ ಯಜ್ಞವೇದಿಕೆ(ಇಟ್ಟಿಗೆ ಗಾರೆ ಸುಣ್ಣ...) ಯಜಮಾನ ಸೌದೆ ಸಮಿತ್ತು ಹವಿಸ್ಸು ಅವುಗಳನ್ನರ್ಪಿಸಲು ಬೇಕಾಗುವ ಸ್ರುಕ್ಕು ಸ್ರವ (ಚಮಚ ಸೌಟು ಇತ್ಯಾದಿ) ಕಬ್ಬಿಣ ಬೆಳ್ಳಿ ಚಿನ್ನ ಅಕ್ಕಿ ಗೋಧಿ ನವಣೆ ಮೊದಲಾದ ಧಾನ್ಯಗಳು... ಹೀಗೆ ಸಮಸ್ತವೂ ಭಗವಂತನೇ, ಸಮಸ್ತವೂ ಭಗವಂತನದೇ. ಸೃಷ್ಟಿಯಲ್ಲಿರುವ ಭಗವದ್ವಸ್ತುವನ್ನು **ನನ್ನದೆಂದು ಅಭಿಮಾನ ಪಡದೆ** ಭಗವದರ್ಪಿತವೂ ಭಗವತ್ಪ್ರಿಯವೂ ಆಗುವಂತೆ ('ಯಜ್ಞೇನ ಕಲ್ಪತಾಂ') ನಡೆದುಕೊಳ್ಳಬೇಕೆಂದು ತಿಳಿಸುವ ಯಜುರ್ವೇದದ ರುದ್ರಾಧ್ಯಾಯ ಚಮಕಾಧ್ಯಾಯಗಳು ಸಾಕಷ್ಟು ಪರಿಚಿತವಾಗಿವೆ. ಈ ವೇದದಲ್ಲಿ ಋತು ಮೊದಲಾದ ವಿಚಾರಗಳಿಗೆ ಸಂಬಂಧಿಸಿದ ಅನೇಕ ವಿಶೇಷ ಅಂಶಗಳು 'ಆರುಣಪ್ರಶ್ನ'ದಲ್ಲಿ ಕಂಡುಬರುತ್ತವೆ. ಗ್ರಹ ನಕ್ಷತ್ರ ತಾರೆಗಳ ಚಲನ ಅದನ್ನನುಸರಿಸಿದ ದಿನ ವಾರ ತಿಥಿ ಮಾಸ ಸಂವತ್ಸರ ಯುಗ ಮೊದಲಾದ 'ಕಾಲ' ಸಂಬದ್ಧವಾದ ಅನೇಕ ವಿಚಾರಗಳನ್ನೂ ಇಲ್ಲಿ ನಾವು ಕಾಣಬಹುದು. ಈ ವೇದದ ನಾಲ್ಕನೇ ಕಾಂಡದಲ್ಲಿ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ

ವಿಷಯಗಳು, ಸಂಖ್ಯೆ, ಹತ್ತರ ಗುಣಕಗಳಾಗಿ ೧೦೧೧೨ರ ವರೆಗಿನ ಸಂಖ್ಯೆಗಳು (ಅವುಗಳ ಹೆಸರುಗಳೊಡನೆ) ರೇಖಾಗಣಿತಕ್ಕೆ ಸಂಬಂಧಿಸಿದ ವಿಚಾರಗಳೂ ಉಪಲಬ್ಧವಿವೆ.

ಇದರ ಜೊತೆಗೆ ಭೌತಿಕ ಸಂಸಾರವನ್ನೇನೂ ವೇದ ಋಷಿಗಳು ಕಡೆಗಣಿಸಿಲ್ಲ, ಸಾಂಸಾರಿಕ ಜೀವನದ ಶಾಂತಿ ಸುಖ ನೆಮ್ಮದಿಗಳನ್ನು ಮಂತ್ರದ ಚೌಕಟ್ಟಿನೊಳಗೆ ತಂದು ಅದರ ಪಾವಿತ್ರ್ಯವನ್ನೂ ಸಾರಿದ್ದಾರೆ. ಮನಸ್ಸು ಬುದ್ಧಿ ಶರೀರ (ಜ್ಞಾನೇಂದ್ರಿಯ+ ಕರ್ಮೇಂದ್ರಿಯ) ಚಟುವಟಿಕೆಗಳೊಡನೆ ಇರುವ ಹೊಂದಾಣಿಕೆ, ಅನುಸರಣೆ, ಸಾಮರಸ್ಯದಂತೆ ಪತಿ-ಪತ್ನಿಯರ ಸಾಮರಸ್ಯವಿರ ಬೇಕು ಎಂದು ಆ ಮಂತ್ರಗಳು ಆಶಿಸುತ್ತವೆ. **(ಮನೋಽಹಮಸ್ಮಿ ವಾಕ್ ತ್ವಂ ಸಾಮಾಹಮಸ್ಮಿ ಋಕ್ ತ್ವಂ ಸಾ ಮಾಮನುವ್ರತಾ ಭವ)** ಬುದ್ಧಿ ಮನಸ್ಸುಗಳ-ಜ್ಞಾನ ಸಂಕಲ್ಪ, ಶರೀರದ ಕ್ರಿಯೆಗೆ (ಲೌಕಿಕ ಧಾರ್ಮಿಕ ಆಧ್ಯಾತ್ಮಿಕ) ಸಹಾಯಕ, ಸಹಕಾರಿಯಾಗಿರುವಂತೆ ಪುರುಷ (ಅಂತಃಸತ್ವ) ಸ್ತ್ರೀ (ಬಾಹ್ಯ ಶರೀರ)ಗಳಲ್ಲೂ ಧಾರ್ಮಿಕ ಆಧ್ಯಾತ್ಮಿಕ ಸಾಧನೆಗಳಲ್ಲಿ ಪರಸ್ಪರ ಪೂರಕತೆ, ಪೋಷಕತೆಯ ಅಗತ್ಯವಿದೆ. ಸಂಸಾರದಲ್ಲಿ ಸಂಸಾರಿಗಳ ಗುರಿ ಗಮ್ಯ ಏಕ ಅಭಿಮುಖ (ಪರತತ್ತ್ವದೆಡೆಗೆ) ಆಗಿರಬೇಕು ಎಂದು ಸಾರುವ ವೈವಾಹಿಕ ಮಂತ್ರಗಳೂ ಈ ವೇದದಲ್ಲಿವೆ. ಅಂತೆಯೇ ಕೌಟುಂಬಿಕ ಜೀವನದ ಆನಂದ ಸಮೃದ್ಧಿ ರೋಗ ರುಜಿನಾದಿ ಬಾಧೆಗಳಿಲ್ಲದಿರುವಿಕೆ ಆರೋಗ್ಯ ಐಶ್ವರ್ಯ ಧನ ಧಾನ್ಯ ಸಮೃದ್ಧಿಯನ್ನು ಅನುಗ್ರಹಿಸುವ (ಸಾಧಿಸಿಕೊಡುವ) ಮಂತ್ರಗಳೂ ಇಲ್ಲಿವೆ. ಉದಾಹರಣೆಗೆ:

**ವಾಸ್ತೋಷ್ಪತೇ ಶಗ್ಮಯಾ ಸಗ್ಂ ಸದಾ ತೇ ಸಕ್ಷೀಮ ಹಿರಣ್ಯಯಾಗಾತು ಮತ್ಯಾ**

**ವಾಸ್ತೋಷ್ಪತೇಪ್ರತಿಜಾನೀಹ್ಯಸ್ಮಾನ್‌ಥ್ಸ್ವಾವೇಕೋಽನಮೀವೋ ಭವಾ ನಃ ॥**

'ನಮಗೆ ಅಗತ್ಯವಾದ ಸಕಲ ವಿಧವಾದ ಅಭ್ಯುದಯ ಸಮೃದ್ಧಿಯಿಂದ ಕೂಡಿ, ರೋಗಬಾಧಾರಹಿತವಾದ ಮನೆ ನಮ್ಮದಾಗುವಂತೆ ಅನುಗ್ರಹಿಸು.'

**ಅದ್ಯಾ ನೋ ದೇವ ಸವಿತಃ ಪ್ರಜಾವತ್ಸಾವೀಃ ಸೌಭಗಮ್ ಪರಾ ದುಃಷ್ವಪ್ನಿಯಗ್ಂ ಸುವ –**

'ದೇವನೆ, ಸಕಲ ಕಾಮನೆಗಳನ್ನು ನೆರವೇರಿಸುವ ಸವಿತೃವೆ, ದುಸ್ಸಂಕಲ್ಪಗಳಿಂದುಂಟಾಗುವ ಬಾಧೆ ಮತ್ತು ಭಯವನ್ನು ದೂರ ಮಾಡಿ ಈ ಮನೆ ಸತ್ಸಂತತಿಯಿಂದ ಕೂಡಿರುವಂತೆ ಕೃಪೆ ಮಾಡು.'

**ಉತ್ ವಯಂ ತಮಸಃ ಪರಿ ಜ್ಯೋತಿಃ ಪಶ್ಯಂತ ಉತ್ತರಂ**
**ದೇವಂ ದೇವತ್ರಾ ಸೂರ್ಯಂ ಅಗನ್ಮ ಜ್ಯೋತಿರುತ್ತಮಮ್ ॥**

'(ಅಜ್ಞಾನ/ಅವಸ್ತು/ಪ್ರಪಂಚ ರೂಪ) ಕತ್ತಲೆಯನ್ನು ಮೀರಿ ಅವುಗಳೆಲ್ಲದರಲ್ಲಿ ಓತಪ್ರೋತವಾಗಿ ಬೆರೆತು ಹೋಗಿರುವ ಉನ್ನತ ಬೆಳಕನ್ನು ಆಶ್ರಯಿಸಿ ಆ ಪರಂಜ್ಯೋತಿಯನ್ನು ನಾವು ಪಡೆಯುವಂತಾಗಲಿ.'

### ಸಾಮವೇದ:

'ಯಾ ಋಕ್ ತತ್ ಸಾಮೇ' ಋಕ್ ಮಂತ್ರಗಳೇ ಉಚ್ಚಾರ ಸ್ವರ ಕಂಪ ಮೊದಲಾದ ಭೇದದಿಂದ ಗಾನಕ್ರಮದ ರೀತಿಯಿಂದ 'ಸಾಮ'ವೆನ್ನಿಸಿಕೊಳ್ಳುತ್ತದೆ. ಇದರಲ್ಲಿ ನಿಷಾಧ ಗಾಂಧಾರಗಳು ಉದಾತ್ತಸ್ವರವಾಗಿಯೂ, ರಿಷಭ ಧೈವತಗಳು ಅನುದಾತ್ತ ಸ್ವರವಾಗಿಯೂ ಷಡ್ಜ ಮಧ್ಯಮ ಪಂಚಮಗಳು ಸ್ವರಿತವಾಗಿಯೂ ವಿಕಾಸಗೊಳ್ಳುತ್ತವೆ. ಈ ಸಾಮವೇದದ ವೈಶಿಷ್ಟ್ಯವೇ ಗಾನ. ಕೃಷ್ಟ ಪ್ರಕೃಷ್ಟ ಮಂದ್ರ ಮಧ್ಯಮ ತಾರ ಶ್ರುತಿಗಳು (ನಾಭಿ ಹೃದಯ ಕಂಠ ಉರ ಶಿರಗಳನ್ನು ವಿಭಿನ್ನ ಸ್ಥಾನಗಳನ್ನು ಸ್ಪರ್ಶಿಸಿ ಸ್ವರಗಳು ಉಚ್ಚರಿತವಾಗುವಾಗ) ಉಂಟಾಗುತ್ತವೆ. ಸ್ವರ ಉಚ್ಚಾರದ ವೇಗವನ್ನವಲಂಬಿಸಿ ಇದರಲ್ಲಿ ದ್ರುತ ಮಧ್ಯಮ ವಿಲಂಬಿತ ಎಂಬ ಗತಿ ಭೇದವೂ ಇದೆ. ಲಯ, ಇಂಪು ಪ್ರಧಾನವಾಗಿದ್ದು ಸಾಧಕನನ್ನು ಅದು ಅಂತರ್ಮುಖಿಗೊಳಿಸುತ್ತದೆ. ಹಿತಮಿತವಾಗಿ ಬೆರೆತ ಸ್ವರಗಳ ನಾದಾನುಸಂಧಾನ ಸಾಧಕನ ಅಂತರಂಗವನ್ನೆಲ್ಲಾ ವ್ಯಾಪಿಸಿ ಶುದ್ಧವಾಗಿಸಿ ಪವಿತ್ರಗೊಳಿಸುತ್ತವೆ. ಸಾಧಕನಲ್ಲಿ ಮಂಗಳಮಯವೂ ಶಾಂತವೂ ಆದ ಭಾವವನ್ನು ತುಂಬುತ್ತವೆ. ಸಾಮಗಾನ ಎಂದು ಕೂಡಲೇ ಎಲ್ಲರ ಮನದ ಮುಂದೆ ನಿಲ್ಲುವುದು ಹಾವು (ಭೌತಿಕವಾದ ವಿಷಜಂತು ಹಾವಲ್ಲ) ಹ ಮತ್ತು ಉ. '**ಏತಥ್ಸಾಮ ಗಾಯನ್ನಾಸ್ತೇ ಹಾ ಉ ಹಾ ಉ ಹಾ ಉ**' ಅಪಹಾಸ್ಯ ಮಾಡಿ ಸಾಮಾನ್ಯ ಜನರು ಗೇಲಿ ಮಾಡಿ ನಗುವಂತೆ ಮಾಡಿದೆ ಈ 'ಹಾ ಉ'. 'ಉ' ಎಂಬುದು ಸೃಷ್ಟಿಯ ಸ್ಥಿತಿತತ್ತ್ವವಾದ ವಿಶ್ವವ್ಯಾಪಕ (ವಿಷ್ಲೃ ವ್ಯಾಪ್ತೌ) ವಿಷ್ಣುತತ್ತ್ವವನ್ನು ಅನುಕಂಪ, ಅಂಗೀಕಾರ, ಮಂಗಳ, ಧೃತಿ, ಕೋಪದ ಮಾತು, ದಯೆ, ನಿಯೋಗ ಆಜ್ಞೆ, ಮುಂತಾದ ಅರ್ಥಗಳನ್ನು ಸೂಚಿಸುತ್ತದೆ. ಈ ಪದ ಪ್ರಯೋಗ ಆಗಿರುವ ಸಂದರ್ಭಕ್ಕೆ ಅನುಗುಣವಾಗಿ ಅದನ್ನು ಅರ್ಥೈಸಿಕೊಳ್ಳಬೇಕು. 'ಹ' ಎಂಬುದು ವಿಕಾಸಗೊಂಡ ಸೃಷ್ಟಿಯ ಲಯತತ್ತ್ವವಾದ ಶಿವನನ್ನು ಪ್ರತಿನಿಧಿಸುತ್ತದೆ. ಜೊತೆಗೆ ರೋಮಾಂಚ, ಗರ್ವ, ಅಹಂಕಾರ, ನೀರು, ನಿಗ್ರಹ, ಶುಭ, ಆಕಾಶ, ಚಂದ್ರ, ಹರ್ಷ, ಆಯುಧ, ನಿಂದೆ ಮೊದಲಾದ ಅನೇಕ ಅರ್ಥಗಳನ್ನು ಹೊಂದಿದೆ. ಈ ಎರಡೂ ಪದಗಳ ವಿಚಾರವನ್ನು ಛಾಂದೋಗ್ಯ ಉಪನಿಷತ್ತು ವಿಸ್ತಾರವಾಗಿ ಚರ್ಚಿಸುತ್ತದೆ.

ನಮ್ಮ ಅತ್ಯಂತ ಆಪ್ತರು, ಬಿಟ್ಟು ಇರಲು ಆಗದಂತಹವರು, ಕಾರಣಾಂತರಗಳಿಂದ ನಮ್ಮಿಂದ ದೂರ ಹೋಗಿ ಹಲವು ಕಾಲ ಕಳೆದಿರುತ್ತದೆ. ಅವರನ್ನು ಭೇಟಿಯಾಗುವ ಸಂದರ್ಭ ಇನ್ನು ಒಂದು ತಿಂಗಳ ನಂತರ ನಮಗೆ ದೊರಕಲಿದೆ ಎಂದಾದರೆ ನಮ್ಮ ಆನಂದಕ್ಕೆ ಎಣೆಯುಂಟೆ? ಆನಂದವೋ ಆನಂದ, ಸಂಭ್ರಮ, ಯಾವು ಯಾವುದೋ ನೆನಪು, ಮುಂದೆ ಅವರೊಡನೆ ದೊರಕುವ ಸಂತೋಷ, ನಾವು ಮಾಡಬೇಕಾದುದು, ನಡೆದುಕೊಳ್ಳಬೇಕಾ

ದುದು... ಹೀಗೆ ಏನೇನನ್ನೋ ಮೆಲುಕು ಹಾಕುತ್ತಾ ಮನಸ್ಸು ಆಕಾಶದಲ್ಲಿ ತೇಲುತ್ತಿರುತ್ತದೆ. '೨೯, ೨೮, ೨೭, ೨೬, ... ಇನ್ನು ೩, ೨ ದಿನ ಅಷ್ಟೆ, ನಾಳೆ ಬಂದೇ ಬಿಟ್ಟಿತು ಆ ದಿನ..'– ಆಹಾ ನಮ್ಮ ಹೃದಯ ಹಾರುತ್ತಿರುತ್ತದೆ. ಶರೀರ ಎಲ್ಲಿ ಯಾವ ಕೆಲಸದಲ್ಲೇ ತೊಡಗಿದ್ದರೂ ದೂರವಾಣಿ ಕರೆಗೆ, ಕಾರು ಅಥವಾ ಆಟೋ ಶಬ್ದಕ್ಕೆ ಗೇಟ್ ತೆಗೆದ ಶಬ್ದಕ್ಕೆ ಕಾತರವಾಗಿ ಕುಣಿಯುತ್ತಿರುತ್ತದೆ. ಅದೋ ಬಂದೇ ಬಿಟ್ಟಿತು ಅವರ ವಾಹನ, ಏನು ಮಾಡುತ್ತಿದ್ದೆವೋ ಆ ಕೆಲಸ ಅಲ್ಲೇ ಬಿಸುಟು ಹಾರುವ ನಡಿಗೆಯಲ್ಲಿ 'ಬಂದರು ಬಂದರು, ಬಂದರು..' ಎಂಬ ಉದ್ವೇಗಪೂರ್ಣವಾದ ಆಪ್ತ ಅಂತರಂಗದ ಏಕಾತ್ಮತೆಯ ತಲ್ಲೀನ, ಆನಂದದ ಕೂಗು ನಮ ಗರಿವಿಲ್ಲದೆ ಹೊರಚಿಮ್ಮುತ್ತದೆ. ಬಾಹ್ಯಜನರ ಪ್ರತಿಕ್ರಿಯೆ, ಸರಿ–ತಪ್ಪು ಯಾವುದರ ಪರಿವೆಯೂ ನಮಗಿರುವುದಿಲ್ಲ. ಅಂತಹ ಭಕ್ತಿಪೂರ್ಣ ಆಧ್ಯಾತ್ಮಿಕ ತನ್ಮಯತೆಯ ಏಕತೆಯ ಉದ್ಗಾರ ಗಳಿಂದ, ಭಕ್ತನ ಹೃದ್ಗತ ಅಭಿಲಾಷೆಗಳ ಆರ್ತ ಅಭಿವ್ಯಕ್ತಿಯಿಂದ ಸಾಮವೇದ ತುಂಬಿ ಹೋಗಿದೆ. ಆದುದರಿಂದಲೋ ಏನೋ ಕೃಷ್ಣ ಭಗವದ್ಗೀತೆಯಲ್ಲಿ '**ವೇದಾನಾಂ ಸಾಮವೇದೋಽಸ್ಮಿ**' ಎಂದು ಹೇಳಿಕೊಂಡಿದ್ದಾನೆ. ಶ್ರದ್ಧೆ ತಲ್ಲೀನತೆ ನಿಷ್ಕಲಂಕತೆ ಭಗವದ್ಭಕ್ತಿ ಸಮರ್ಪಣಾಭಾವಗಳ ವಿಶಿಷ್ಟ ಆಯಾಮ ಇಲ್ಲಿದೆ.

### ಅಥರ್ವವೇದ:

ಇದಕ್ಕೆ ಬಿಂದು ಸ್ಥಾನ, ಯಾಗಗಳಲ್ಲಿ ಬ್ರಹ್ಮಸ್ಥಾನ. ಏಕೆಂದರೆ ಜೀವನದ ಭೌತಿಕ–ಆಂತರಂಗಿಕ ಯಾಗ ಕ್ರಿಯಾ ಚಟುವಟಿಕೆಗಳಿಗೆ ಪ್ರತಿಬಂಧಕಗಳನ್ನೊಡ್ಡುವ ಶಾರೀರಿಕ ಬೌದ್ಧಿಕ ಮಾನಸಿಕ ಆರ್ಥಿಕ ಆಧಿಭೌತಿಕ ಆಧಿದೈವಿಕ ಆಧ್ಯಾತ್ಮಿಕ ಎಲ್ಲಾ ರೀತಿಯ ಅಡಚಣೆ ಗಳನ್ನು, ಪೀಡೆ ಬಾಧೆಗಳನ್ನು ನಿವಾರಿಸಲು ಅಗತ್ಯವಾದ ಮಂತ್ರ ಗಳು (ಇತರ ವೇದಗಳಲ್ಲಿರುವ ಮಂತ್ರಗಳ ಜೊತೆಯಲ್ಲಿ) ವಿಶೇಷ ವಾಗಿ ಇಲ್ಲಿವೆ. ಈ ಕಾರಣ ಇದನ್ನು ಮಾಯ, ಮಾಟದ ವೇದ ವೆಂದು ಕಡೆಗಣಿಸಿ ಹೇಳುವುದೂ ಇದೆ. ಎಲ್ಲಾ ವೇದಗಳಲ್ಲಿರುವ ಮಂತ್ರ, ಅವುಗಳ ಅರ್ಥಪ್ರತಿಪಾದಿತ ಬ್ರಹ್ಮ ಪ್ರತಿಪಾದಿಕ ಮಂತ್ರ ಗಳು ಇಲ್ಲೂ ಇವೆ. ಅವನ್ನು ಹೊರತುಪಡಿಸಿ ಶೇಕಡಾ ೧೫–೨೦ ರಷ್ಟು ಭಾಗದ ಮಂತ್ರಗಳು ಮಾತ್ರ ಈ ವಿಚಾರಗಳನ್ನು ಪ್ರತಿ ಪಾದಿಸುತ್ತವೆ. ಯಾಗ ಯಜ್ಞಗಳು ಆಧ್ಯಾತ್ಮಿಕ ಸಾಧನೆ ಮತ್ತು ಸ್ಥಿತಿ ಲಯಗಳಿಗೆ ಇವು ನಿಶ್ಚಿತವಾಗಿ ಅಗತ್ಯವೂ ಹೌದು.

ಹಲವಾರು ವಿಧ ರೋಗಗಳು, ಅವುಗಳಿಗೆ ಕಾರಣವಾದ ಸೂಕ್ಷ್ಮಾಣು ಕೀಟಾಣು ವೈರಾಣು ರೋಗಾಣುಗಳ ಸ್ವರೂಪ, ಗುಣ ಅವುಗಳ ಉತ್ಪತ್ತಿ, ಅವು ಇರುವ ಜಾಗ, ಅವುಗಳನ್ನು ನಿಯಂತ್ರಣ ಮಾಡುವ ಕ್ರಮ ಮುಂತಾದ ಅನೇಕ ಉಪಯುಕ್ತ ವಿಚಾರಗಳನ್ನು ತಿಳಿಸುವ ಮಂತ್ರಗಳೂ ಮಂತ್ರ ಓಷಧಿಗಳೂ ಇಲ್ಲಿವೆ.

### ವೇದಾಂಗಗಳು

ವೇದಗಳಲ್ಲಿರುವ ಮಂತ್ರಗಳ ಉಚ್ಚಾರ ಕ್ರಮ, ಅದಕ್ಕೆ ಅಗತ್ಯವಾದ ಶರೀರದ ಅವಯವಗಳಲ್ಲಿ ಆಗುವ ಪರಿವರ್ತನೆ ಮೊದಲಾದ ವಿಚಾರವನ್ನು ತಿಳಿಸುವ (೧) **ಶಿಕ್ಷಾ;** ಮಂತ್ರದ ಲ್ಲಿರುವ ಪದಗಳು, ಸಮಾಸಗಳು, ಅವ್ಯಯಗಳು, ವಿಭಕ್ತಿ ಪ್ರತ್ಯಯಗಳು, ಸಂಧಿ– ಸಮಾಸಗಳಿಂದ ಸ್ವರ ಮತ್ತು ಅರ್ಥಗಳಲ್ಲಿ ಆಗುವ ಬದಲಾವಣೆಗಳು ಇತ್ಯಾದಿ ಅನೇಕ ಅಂಶಗಳನ್ನು ತಿಳಿ ಸುವ (೨) **ವ್ಯಾಕರಣ;** ವೇದಪ್ರಯುಕ್ತವಾದ ಛಂದಸ್ಸುಗಳು, ಅವುಗಳ ಸ್ವರೂಪ, ಅದರ ಅಧಿದೇವತೆ, ಅವರಿಂದ ಉಂಟಾಗುವ ಲಾಭ, ಪ್ರಯೋಜನ — ಮುಂತಾದ ಅಂಶಗಳನ್ನು ತಿಳಿಸುವ (೩) **ಛಂದ;** ವೇದೋಕ್ತ ಯಜ್ಞ ಯಾಗಾದಿಗಳ ಆಚರಣೆ ಸೂಕ್ತವಾದ ಕಾಲಾದಿಗಳನ್ನು ನಕ್ಷತ್ರ ಗ್ರಹಗತಿ ಮುಂತಾದ ಅನೇಕ ವಿಶೇಷ ಜ್ಯೋತಿಃಕಾಯಗಳಿಗೆ ಸಂಬಂಧಿಸಿದ (೪) **ಜ್ಯೌತಿಷ;** ವೇದೋಕ್ತ ಮಂತ್ರಗಳ ಪದಗಳ ವ್ಯುತ್ಪತ್ತಿ, ಪ್ರಾತಿಪದಿಕ ಧಾತು ಪ್ರತ್ಯಯಾದಿಗಳಿಂದ ಉಂಟಾಗುವ ವಿಶಿಷ್ಟ ವಿಭಿನ್ನ ಅರ್ಥಗಳನ್ನು ಸೂಚಿಸುವ (೫) **ನಿರುಕ್ತ,** ಯಜ್ಞಯಾಗಾದಿ ನಿರ್ವಹಣೆಗೆ ನಿರ್ವ ಹಿಸಬೇಕಾದ ಯಜ್ಞ, ಮಂಟಪ, ಯೂಪ, ಸ್ತಂಭ, ಯಜಮಾನನ ವಾಸಸ್ಥಾನ, ಆತನ ಕುಟುಂಬದ ವಾಸ, ಋತ್ವಿಕ್ಕುಗಳ ನೆಲೆ ಇವೆಲ್ಲ ವನ್ನೂ ನಿರ್ಮಿಸುವ ಕ್ರಮ, ಅಗತ್ಯವಾದ ಇಟ್ಟಿಗೆ ಜೋಡಿಸ ಬೇಕಾದ ಆಕಾರ ಮುಂತಾದ ಅನೇಕ ವ್ಯವಹಾರಿಕ ಲೌಕಿಕ ರೀತಿ ನೀತಿಗಳನ್ನು ತಿಳಿಸುವ (೬) **ಕಲ್ಪ** — ಈ ಆರೂ ವೇದದ ಅಂಗಶಾಸ್ತ್ರಗಳಾಗಿವೆ. ಇವೆಲ್ಲವೂ ಒಟ್ಟಾಗಿ ವೇದವಾಙ್ಮಯ ಎನ್ನಿಸಿ ಕೊಳ್ಳುತ್ತದೆ.

ಮೇಲೆ ಹೇಳಿರುವ ಎಲ್ಲಾ ಅಂಶಗಳನ್ನೂ ಸಂಗ್ರಹವಾಗಿ ತಿಳಿಸುವ ಅತ್ಯಂತ ಪ್ರಸಿದ್ಧವಾದ ಒಂದು ಶಾಂತಿಮಂತ್ರವನ್ನು ಹಾಗೂ ಅರ್ಥವನ್ನು ಭಾವಿಸುತ್ತಾ ಈ ಲೇಖನವನ್ನು ಉಪ ಸಂಹ ರಿಸಬಹುದು :

**ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯ ಮೃತಾತ್ಸಂಬಭೂವ । ಸ ಮೇಂದ್ರೋ ಮೇಧಯಾ ಸ್ಪೃಣೋತು। ಅಮೃತಸ್ಯ ದೇವಧಾರಣೋ ಭೂಯಾಸಮ್। ಶರೀರಂ ಮೇ ವಿಚರ್ಷಣಮ್। ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿವಿಶ್ರುವಮ್। ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ। ಶ್ರುತಂ ಮೇ ಗೋಪಾಯ । ಓಂ ಶಾಂತಿಃ ಶಾಂತಿಃ ಶಾಂತಿಃ ।।**

'ಅಮೃತಮಯವಾದ, ಎಲ್ಲಕ್ಕೂ ಶ್ರೇಷ್ಠವಾದ ಪರಾತ್ಪರ ಪುರುಷವಸ್ತುವಿನಿಂದ ವಿಸ್ತಾರವಾಗಿ ವಿಕಾಸಗೊಂಡ ಪುರು (ಅನೇಕ, ಗಣನೆಗೆ ಬಾರದ) ರೂಪ ಅಥವಾ ವಿಸ್ತಾರರೂಪವನ್ನು ಪರತತ್ತ್ವವು ನನ್ನ ಮೇಧೆ (ಗ್ರಹಣ ಧಾರಣ ಪೋಷಣ ತತ್ತ್ವ) ಯಲ್ಲಿ ರಕ್ಷಿಸಲಿ. ನನ್ನ ಶರೀರ ಅದರ ಹೊರಕವಚ, ಕಿವಿಗಳಿಂದ ಅನೇಕ ವಿಧವಾಗಿ ಕೇಳಿದ ಸಹಸ್ರಾರು ಶಬ್ದ ತರಂಗಾಂತರಗಳು ಸುರಕ್ಷಿತವಾಗಿರುವಂತೆ ಅನುಗ್ರಹಿಸಲಿ. ನನ್ನ ನಾಲಿಗೆ ಮಧು ಮತ್ತಮ (ಮಧುರಕ್ಕೆ ಮಧುರವಾದ ಪರಮಾತ್ಮ ನಾಮ ಸ್ಪರ್ಶ ದಿಂದ) ವಾಗಿ ಆಗಲಿ. ನಾನು ಕೇಳಿದ (ಹೇಳಿದ) ಎಲ್ಲವೂ ರಕ್ಷಿತ ವಾಗುವಂತೆ ಆಗಲಿ.' ◆



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೭



ನಿರಂಜನ ಮಹಾರಾಜರು, ''ಇಲ್ಲ, ಕೊಲ್ಕತ್ತೆಗೆ ಹೋಗಿ ಸರಿಯಾದ ಚಿಕಿತ್ಸೆ ಹಾಗೂ ಪಥ್ಯಗಳನ್ನು ಮಾಡಿದಲ್ಲದೆ ನಿನ್ನ ಕಾಯಿಲೆ ವಾಸಿಯಾಗುವುದಿಲ್ಲ. ನಡೆ, ನಿನ್ನನ್ನು ಬಲರಾಮಬಾಬುವಿನ ಮನೆಯಲ್ಲಿರಿಸಿ ಬರುವೆ'' ಎಂದರು. ಅದಕ್ಕೆ ಕಾಳೀಕೃಷ್ಣನು ಒಪ್ಪಿ ನಡೆದನು. ವರಾಹನಗರಕ್ಕೆ ಬಂದ ಮೇಲೂ ಕಾಳೀಕೃಷ್ಣನ ಮೇಲೆ ಜಯರಾಂಬಾಟಿಯಲ್ಲಿ ಬಂದಿದ್ದ ಮಲೇರಿಯಾ ಜ್ವರವು ಮತ್ತೆ ಆಕ್ರಮಣ ಮಾಡಿತ್ತು. ಶರತ್ ಮಹಾರಾಜರು ಮತ್ತು ಕಾಳೀಕೃಷ್ಣ ಮತ್ತೆ ಮತ್ತೆ ಹಾಸಿಗೆ ಹಿಡಿಯತೊಡಗಿದ್ದರು. ಶರತ್ ಮಹಾರಾಜರೂ ಬಲರಾಮ ಬಾಬುವಿನ ಮನೆಗೆ ಹೋಗಿ, ಅಲ್ಲೇ ಇದ್ದು ಚಿಕಿತ್ಸೆ ಪಡೆಯುತ್ತಿದ್ದರು. ಈಗ ಕಾಳೀಕೃಷ್ಣನೂ ಅಲ್ಲಿಗೆ ಬಂದು ಸೇರಿಕೊಂಡನು. ಶ್ರೀರಾಮಕೃಷ್ಣರ ಭಕ್ತರಾದ ಡಾ. ವಿಪಿನ್ ಘೋಷರ ಚಿಕಿತ್ಸೆಯಿಂದ ಇಬ್ಬರೂ ನಿಧಾನವಾಗಿ ಗುಣಮುಖರಾಗತೊಡಗಿದರು. ನಿರಂಜನ ಮಹಾರಾಜರು ಆಗಾಗ ಗಿರೀಶ ಬಾಬುಗಳ ಮನೆಯಲ್ಲಿ ಮಧ್ಯಾಹ್ನದ ಊಟ ಮಾಡುತ್ತಿದ್ದರು. ಹಾಗೆಯೇ ಕಾಳೀಕೃಷ್ಣನನ್ನೂ ಜೊತೆಗೊಯ್ಯುತ್ತಿದ್ದರು. ಗಿರೀಶ್ ಹಾಗೂ ನಿರಂಜನಾನಂದರು ಶ್ರೀರಾಮಕೃಷ್ಣರ ಸಂಬಂಧವಾಗಿ ಅನೇಕ ಮಾತುಕತೆಗಳನ್ನಾಡುತ್ತಿದ್ದರು; ಇದನ್ನು ಕಾಳೀಕೃಷ್ಣನೂ ತನ್ಮಯನಾಗಿ ಕೇಳುತ್ತಿದ್ದನು.

ಬಲರಾಮಬಾಬುವಿನ ಮನೆಯಲ್ಲಿ ಆಗ ಅವರ ಕುಲಗುರುಗಳ ವಂಶಸ್ಥನಾದ ಫಕೀರ ಎಂಬಾತನೊಬ್ಬ ವಾಸಿಸುತ್ತಿದ್ದ (ಅವನ ವಯಸ್ಸು ೩೦-೩೨). ಆತ ತುಂಬ ವಿನಯಶೀಲನೂ, ಪವಿತ್ರ ಸ್ವಭಾವವುಳ್ಳವನೂ, ಧರ್ಮನಿಷ್ಠನೂ ಶ್ರೀರಾಮಕೃಷ್ಣರ ಭಕ್ತನೂ ಆಗಿದ್ದ. ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು. ಹಠಾತ್ತಾಗಿ ಅವನು ಕ್ಷಯರೋಗಕ್ಕೊಳಗಾದ. ಶರತ್ ಮಹಾರಾಜರು ಆ ಫಕೀರನ ಸೇವೆಯ ಭಾರವನ್ನು ತಾವೇ ಹೊತ್ತುಕೊಂಡರು. ಕಾಳೀಕೃಷ್ಣನೂ ಈ ಸೇವೆಯಲ್ಲಿ ಭಾಗಿಯಾದ. ರೋಗವು ಬರಬರುತ್ತಾ ಉಲ್ಬಣಗೊಂಡಿತು. ರಕ್ತ ವಾಂತಿಯಾಗತೊಡಗಿತು. ಬೋಗುಣಿಯನ್ನು ತೊಳೆದು ತರುವಷ್ಟರಲ್ಲೇ ಮತ್ತೆ ಅದನ್ನು ಬಾಯಿಗೆ ಹಿಡಿಯಬೇಕಾಗುತ್ತಿತ್ತು. ಬಹಳ ಪ್ರಯತ್ನಿಸಿದರೂ ರೋಗಿಯನ್ನು ಉಳಿಸಿಕೊಳ್ಳಲಾಗಲಿಲ್ಲ. ಶರತ್ ಮಹಾರಾಜರ ಎದೆಗುಂದದ ಸೇವಾಭಾವವು ಕಾಳೀಕೃಷ್ಣನ ಮನದಲ್ಲಿ ಆಳವಾದ ಮುದ್ರೆಯೊತ್ತಿತ್ತು.

ಇಷ್ಟರಲ್ಲೇ ಮಠವು ಆಲಂಬಜಾರಿಗೆ ವರ್ಗಾವಣೆಯಾಯಿತು (೧೮೯೨ರ ಮೊದಲನೇ ಅರ್ಧದಲ್ಲಿ). ಕಾಳೀಕೃಷ್ಣನು ತನ್ನ ಸ್ಮೃತಿಯಲ್ಲಿ ಈ ವಿಚಾರವನ್ನು ಹೀಗೆ ಉಲ್ಲೇಖಿಸಿದ್ದಾನೆ:

''(ಆಲಂಬಜಾರ್ ಮಠವು) ಚೌಕಟ್ಟಾದ ದೊಡ್ಡ ತೊಟ್ಟಿಮನೆ. ರಸ್ತೆಯಂಚಿಗೆ ಕಂಬಗಳುಳ್ಳ ಕಿರಿದಾದ ವರಾಂಡ. ಗಲ್ಲಿಗೆ ಎದುರಾದ ಬಾಗಿಲಿನಿಂದ ಪ್ರವೇಶಿಸಿದರೆ ಮುಂದೆಯೇ ಅಂಗಳ ಹಾಗೂ ಚಂಡೀಮಂಟಪ (ದುರ್ಗಾಪೂಜೆ ಮಾಡುವ ಮಂಟಪ). ಹೊರಗಡೆ ಮೆಟ್ಟಿಲ ಪಾವಟಿಗೆಯ ಬಲಕ್ಕೆ ಎರಡು ಕೊಠಡಿಗಳಲ್ಲಿ ತುಂಬ ಕತ್ತಲು; ಯಾರೂ ಅದನ್ನು ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. ಅಲ್ಲಿ ಬಹಳ ಹಿಂದೆ ಅಪಮೃತ್ಯುವಾಗಿತ್ತೆಂಬ ವದಂತಿ ಇತ್ತು. ಶಾರದಾ ಮಹಾರಾಜರು ಅಲ್ಲಿನ ಒಂದು ಕೊಠಡಿಯಲ್ಲಿ ಸ್ತೋತ್ರಪಾಠ, ಜಪಧ್ಯಾನ ಮಾಡುತ್ತಿದ್ದರು; ಮುಂದೆ ನಾನೂ

ಆಗಾಗ ಹಾಗೆಯೇ ಮಾಡುತ್ತಿದ್ದೆ. ಹೊರಮನೆಯ ಮೇಲ್ಮಹಡಿಯಲ್ಲಿ ಎರಡು ದಿಕ್ಕಿನಲ್ಲೂ ವರಾಂಡಾ, ಉತ್ತರಕ್ಕೆ ಒಂದು ದೊಡ್ಡ ಹಜಾರ, ಅದರ ಮೂಲಕ ಹೋದರೆ ಒಂದು ಚಿಕ್ಕ ಕೊಠಡಿ. ಹಜಾರದಲ್ಲಿಯೇ ಎಲ್ಲರೂ ಕುಳಿತುಕೊಳ್ಳುತ್ತಿದ್ದರು ಮತ್ತು ರಾತ್ರಿ ಚಾಪೆ ಮತ್ತು ಜಮಖಾನೆ ಹರಡಿ ೮-೧೦ ಜನರು ಅಕ್ಕಪಕ್ಕ ಮಲಗುತ್ತಿದ್ದರು.

''ಒಳಮನೆಗೆ ಪ್ರವೇಶಿಸಿದರೆ ಎಡಕ್ಕೆ ದೇವರಕೋಣೆ, ಬಲಕ್ಕೆ ಮೂರು ಮಲಗುವ ಕೊಠಡಿಗಳು. ಪೂರ್ವಕ್ಕೆ ದೇವರ ಉಗ್ರಾಣ, ಮೂರುಕಡೆ ವರಾಂಡಾ ಮತ್ತು ಪಕ್ಕದಲ್ಲಿ ಬಿಸಿಲುಮಚ್ಚು. ಅದರ ಒಂದು ಮೂಲೆಯಲ್ಲಿ ಪಾಯಖಾನೆ. ದೇವರಕೋಣೆ ಮತ್ತು ಉಗ್ರಾಣದ ನಡುವೆ ಕೆಳಗೆ ಹೋಗುವ ಮೆಟ್ಟಿಲು. ಕೆಳಗಿನ ಕೊಠಡಿಗಳಲ್ಲಿ ಒಂದು ಅಡಿಗೆಮನೆ, ಎರಡು ಗೋದಾಮು, ಒಂದು ನೀರಿನ ಮನೆ. (ಇಲ್ಲಿ ಮಣ್ಣಿನ ಕೆಲವು ದೊಡ್ಡ ಗುಡಾಣಗಳಿದ್ದವು; ಒಬ್ಬ 'ಭಾರಿ'ಯು ಕುಡಿಯುವ ಮತ್ತು ಅಡುಗೆಯ ನೀರನ್ನು ಗಂಗೆಯಿಂದ ತಂದು ತುಂಬುತ್ತಿದ್ದನು). ಒಂದು ಕೊಠಡಿಯು ಖಾಲಿಯಾಗಿಯೇ ಇರುತ್ತಿತ್ತು. ಅದರಲ್ಲಿ ಕೆಲವೊಮ್ಮೆ ಗೋಪಾಲೇರ್ ಮಾ ಬಂದು, ಒಂದೆರಡು ದಿನ ಇದ್ದು ಹೋಗುತ್ತಿದ್ದರು. ಗೌರಿ ಮಾ ಕೂಡ ಯಾವಾಗಲೋ ಒಮ್ಮೆ ಬಂದು ರಾತ್ರಿಹೊತ್ತು ಇದ್ದುಹೋಗುತ್ತಿದ್ದರು ಕೂಡ. ಕೆಳಗಿನ ವರಾಂಡದಲ್ಲಿ ಊಟ-ತಿಂಡಿಗಳು ನಡೆಯುತ್ತಿದ್ದವು. ಹಿತ್ತಲ ಬಾಗಿಲನ್ನು ದಾಟಿದರೆ ಕೊಳ, ಪಕ್ಕದಲ್ಲಿ ಶೌಚಾಲಯ. ಕೊಳದ ಘಟ್ಟದಲ್ಲಿ ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು ನಡೆಯುತ್ತಿತ್ತು. ಇದು 'ಭೂತದ ಮನೆ' ಎಂದು ಯಾರೂ ಬಾಡಿಗೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಆದ್ದರಿಂದಲೇ ಅಷ್ಟು ದೊಡ್ಡ ಮನೆ ಕೇವಲ ಹತ್ತು ರೂ. ಬಾಡಿಗೆಗೆ ಸಿಕ್ಕಿತ್ತು. ಬೇಸಿಗೆಯ ರಾತ್ರಿಗಳಲ್ಲಿ ಮೇಲ್ಮಹಡಿಯ ಬಿಸಿಲುಮಚ್ಚಿನಲ್ಲಿ ಅನೇಕರು ಚಾಪೆ ಹಾಸಿ ಮಲಗುತ್ತಿದ್ದರು. ಅಲ್ಲಿ ರಾತ್ರಿ ಬಹಳ ಹೊತ್ತಿನವರೆಗೂ ಶ್ರೀರಾಮಕೃಷ್ಣರ ಬಗ್ಗೆ ಮಾತುಕತೆ, ಆಧ್ಯಾತ್ಮಿಕ ವಿಷಯಗಳ ಬಗ್ಗೆ ಚರ್ಚೆ ಮತ್ತು ವಿನೋದ ನಡೆಯುತ್ತಿದ್ದವು. ಹರಿ ಮಹಾರಾಜರೂ ತುಳಸಿ ಮಹಾರಾಜರೂ ಆ ಮನೆಯಲ್ಲಿ ಭೂತವನ್ನು ನೋಡಿದ್ದರು. ಗಂಗೆ ಎರಡು ಫರ್ಲಾಂಗ್ ದೂರದಲ್ಲಿತ್ತು; ಎಲ್ಲರೂ ಗಂಗಾಸ್ನಾನ ಮಾಡುತ್ತಿದ್ದರು. ಘಟ್ಟದ ಹತ್ತಿರ ಒಂದು ಕಲ್ಲಿದ್ದಲಿನ ಡಿಪೋ ಇತ್ತು. ಅದರ ಮಾಲೀಕನು ಸಾಧುಗಳನ್ನು ತುಂಬ ಗೌರವದಿಂದ ಕಾಣುತ್ತಿದ್ದ.''

ವರಾಹನಗರದಂತೆಯೇ ಆಲಂಬಜಾರಿನ ಮಠದಲ್ಲೂ ಕಾಳೀಕೃಷ್ಣನ ದಿನಗಳು ಬಹಳ ಆನಂದದಿಂದ ಸಾಗತೊಡಗಿದವು. ಅಲ್ಲಿಂದ ದಕ್ಷಿಣೇಶ್ವರ ಕೇವಲ ಅರ್ಧ ಮೈಲಿ ದೂರದಲ್ಲಿತ್ತು. ಸಾಮಾನ್ಯವಾಗಿ ಅಲ್ಲಿಗೆ ಎಲ್ಲರೂ ಸಂಜೆ ಹೋಗುತ್ತಿದ್ದರು. ಆ ಕಾಲದಲ್ಲಿ ಸಾಮಾನ್ಯವಾಗಿ ಕಾಳೀಮಂದಿರಕ್ಕೆ ಭಕ್ತರಲ್ಲದೆ ಬೇರೆ ಯಾರೂ ಹೋಗುತ್ತಿರಲಿಲ್ಲ. ಆದ್ದರಿಂದ ಅದು ಬಹಳ ನಿರ್ಜನವಾಗಿಯೇ ಇರುತ್ತಿತ್ತು. ಪಂಚವಟಿ ಮತ್ತು ಬಿಲ್ವ ಮರದಡಿಯಲ್ಲಿ ಮಠದ ಕೆಲವರು ಜಪ,ಧ್ಯಾನಗಳಲ್ಲಿ ನಿರತರಾಗಿ ರಾತ್ರಿ ಬಹಳ ಹೊತ್ತು ಇದ್ದು ಬರುತ್ತಿದ್ದರು. ಕಾಳೀಕೃಷ್ಣನೂ ಸಹ ಆಗಾಗ್ಗೆ ಅವರೊಂದಿಗೆ ಹೋಗಿ ಅದೇರೀತಿ ಇದ್ದು ಬರುತ್ತಿದ್ದನು. ಅವನಿಗೊಂದು ಪ್ರತಿನಿತ್ಯದ ಕೆಲಸವಿರುತ್ತಿತ್ತು — ಮಧ್ಯಾಹ್ನ ಊಟವಾದ ಮೇಲೆ ದಕ್ಷಿಣೇಶ್ವರ ದೇವಾಲಯದ ತೋಟದಿಂದ ಅರಳುತ್ತಿರುವ ನಿತ್ಯಮಲ್ಲಿಗೆಯ ಮೊಗ್ಗುಗಳನ್ನು ತಂದು ಶ್ರೀರಾಮಕೃಷ್ಣರಿಗೆ ದಪ್ಪನೆಯ ದಂಡೆಮಾಲೆ ಮಾಡುವುದು. ಆಗ ಅಲ್ಲಿ ಬೇಕಾದಷ್ಟು ಹೂಗಳು ಬಿಡುತ್ತಿದ್ದವು. ಕಾಳೀದೇವಾಲಯದ ಎಲ್ಲ ಮಂದಿರಗಳ ಪೂಜೆಗೆ ಬೇಕಾದಷ್ಟು ಬಳಸಿಕೊಂಡ ಮೇಲೆ, ಸುತ್ತ ಮುತ್ತಲಿನವರು ಕಿತ್ತುಕೊಂಡ ಬಳಿಕವೂ ಹೂದೋಟವು ಹೂಗಳಿಂದ ತುಂಬಿರುತ್ತಿತ್ತು. ಶ್ರೀರಾಮಕೃಷ್ಣರ ಅಣ್ಣನ ಮಗನಾದ ರಾಮಲಾಲ್ ದಾದಾ ಆಗ ಭವತಾರಿಣಿಯ ಪೂಜೆ ಮಾಡುತ್ತಿದ್ದರು. ಶ್ರೀರಾಮಕೃಷ್ಣರ ಸಮಕಾಲೀನರಾದ ಹಾಜರಾ ಮಹಾಶಯರು ಆಗಲೂ ಸಹ ಶ್ರೀರಾಮಕೃಷ್ಣರ ಕೊಠಡಿಯ ಅದೇ ಆಗ್ನೇಯ ವರಾಂಡದಲ್ಲಿ ಕಂಬಳಿ ಹಾಸಿಟ್ಟುಕೊಂಡು ತಮ್ಮ ಸ್ಥಳವನ್ನು ಉಳಿಸಿಕೊಂಡಿದ್ದರು. ಹಗಲೂರಾತ್ರಿ ಕುಳಿತು, ಮಲಗಿ, ಜಪ-ತಪ ಮಾಡುತ್ತ ಮಾತುಕತೆಯಾಡುತ್ತಿದ್ದುದು — ಎಲ್ಲವೂ ಅಲ್ಲಿಯೇ. ಮಠದಿಂದ ಯಾರಾದರೂ ಹೋದರೆ ಅವರು ಬಹಳ ಉಪಚರಿಸುತ್ತಿದ್ದರು. ಕಾಳೀಕೃಷ್ಣನೊಂದಿಗೂ ಹಲವು ಬಾರಿ ಇವರ ಭೇಟಿ ನಡೆದಿತ್ತು.

ಆ ಸಮಯದಲ್ಲಿ ಹಳಬರಾದ ಮನೋಮೋಹನ, ಹರೀಶ ಮುಂತಾದ ಭಕ್ತರೂ, ಮಹಿಮಾ ಚಕ್ರವರ್ತಿಯೂ ಆಗಾಗ ಆಲಂಬಜಾರಿನ ಮಠಕ್ಕೆ ಬರುತ್ತಿದ್ದರು. ಸ್ವಾಮೀಜಿಯವರ ತಮ್ಮನಾದ ಮಹೇಂದ್ರನಾಥ ದತ್ತರೂ ಸಾಮಾನ್ಯವಾಗಿ ಬಂದುಹೋಗುತ್ತಿದ್ದರು. ಡಾನ್ ಸೊಸೈಟಿಯ (Dawn Society) ಸತೀಶ್ ಚಂದ್ರ ಮುಖ್ಯೋಪಾಧ್ಯಾಯರೂ ೨-೩ ದಿನ ಅಲ್ಲಿ ತಂಗಿರುತ್ತಿದ್ದರು. ಅವರು ಈಗ ಭಾರಿ ಭಕ್ತರಾಗಿಬಿಟ್ಟಿದ್ದರು. ಮಾಸ್ಟರ್ ಮಹಾಶಯರೂ ಆಗಾಗ ಬಂದು ಕೆಲವು ದಿನಗಳಿದ್ದು ಹೋಗುತ್ತಿದ್ದರು. ಗೋಪಾಲೇರ್ ಮಾ ಕೂಡ ಬಂದು ೨-೩ ದಿನ ತಂಗುತ್ತಿದ್ದರು. ಆಗೆಲ್ಲ ಕಾಳೀಕೃಷ್ಣ ಅವರ ಸೇವೆ ಮಾಡುತ್ತಿದ್ದ ಹಾಗೂ ಅವರಿಗೆ ಅಗತ್ಯವಿದ್ದುದನ್ನು ತರಿಸಿಕೊಡುತ್ತಿದ್ದ. ಗೋಪಾಲೇರ್ ಮಾ-ರನ್ನು ಕಾಳೀಕೃಷ್ಣ ಮೊದಲು ಭೇಟಿಯಾದಾಗಿನ ನೆನಪುಗಳನ್ನು ಅವನದೇ ಮಾತುಗಳಲ್ಲಿ ಕೇಳೋಣ:

''ನಾನು ಆಗ ಮನೆಯಲ್ಲಿದ್ದೆ, ಮಠಕ್ಕೆ ಹೋಗಿಬಂದು ಮಾಡುತ್ತಿದ್ದೆ. ಗೋಪಾಲೇರ್ ಮಾ-ಅವರ ವೃತ್ತಾಂತವನ್ನು ಕೇಳಿ, ಒಂದುದಿನ ಬೆಳಗಾಗೆದ್ದು ನಾರಿಕೇಲ್‌ಡಂಗಾದ ಮನೆಯಿಂದ ಹೊರಟು ಬಡೋಬಜಾರಿನ ಘಟ್ಟಕ್ಕೆ ಹೋಗಿ ಶೇರ್ (share) ನೌಕೆಯಲ್ಲಿ ಕಾಮಾರ್‌ಹಾಟಿಗೆ ಹೋದೆ. ಗೋವಿಂದ ದತ್ತನ ತೋಟದ ಮನೆಯಲ್ಲಿ ಗೋಪಾಲೇರ್ ಮಾ ವಾಸಿಸುತ್ತಿದ್ದರು. ನಾನು ತಲುಪಿದಾಗ ಬೆಳಗ್ಗೆ ೧೧ ಗಂಟೆಯಾಗಿಬಿಟ್ಟಿತ್ತು. ಆಗಲೂ

ಅವರು ಮಾಲೆ ಹಿಡಿದು ಜಪ ಮಾಡುತ್ತಿದ್ದರು. ನನ್ನನ್ನು ಕಂಡು, 'ಬಾ ಗೋಪಾಲ, ಬಾ' ಎಂದು ಸ್ವಾಗತಿಸಿದರು. ನಾನು ದೇವರಿಗೆ ಅರ್ಪಿಸಲು ಸ್ವಲ್ಪ ಸಿಹಿತಿಂಡಿ ಕೊಂಡೊಯ್ದಿದ್ದೆ. ಅವರು ಗೂಟಕ್ಕೆ ತಗುಲಿ ಹಾಕಿದ್ದ ಚೀಲವೊಂದನ್ನು ತೋರಿಸಿದರು. ಸಿಹಿತಿಂಡಿಯನ್ನು ಅದರಲ್ಲಿಟ್ಟೆ. ಅನಂತರ ಅವರಿಗೆ ನಮಸ್ಕರಿಸಿ, ಪಾದಧೂಳಿ ತೆಗೆದುಕೊಂಡು ಅವರ ಮುಂದೆ ಕುಳಿತೆ. ಅವರು ನನ್ನ ಪರಿಚಯ ಕೇಳಿದರು. ನಾನು ಮಠಕ್ಕೆ ಹೋಗಿ ಬರುತ್ತಿದ್ದೆ ಹಾಗೂ ಶ್ರೀರಾಮಕೃಷ್ಣರ ಭಕ್ತ ಎಂಬುದನ್ನು ಕೇಳಿ ಅವರಿಗೆ ಬಹಳ ಆನಂದವಾಯಿತು. ಅವರು, ''ಅಪ್ಪಾ, ನೀನೇನೋ ಬಂದಿದ್ದೀಯಾ. ಆದರೆ ನಾನು ಅಭಾಗಿನಿ, ಏನೋ ಸ್ವಲ್ಪ ಸೊಪ್ಪು-ಅನ್ನ ತಿಂದುಕೊಂಡಿದ್ದೇನೆ. ನಿನಗೇನು ತಾನೆ ಅಡಿಗೆ ಮಾಡಿ ಬಡಿಸಲಿ! ಒಡತಿ (ಗೋವಿಂದ ದತ್ತನ ಪತ್ನಿ, ಆಗ ವಿಧವೆ) ಸ್ವಲ್ಪ ಹಣವನ್ನು ಮಾಸಾಶನವಾಗಿ ಕೊಡುತ್ತಾಳೆ; ಅದರಿಂದಲೇ ಗೋಪಾಲನಿಗೆ ಸೊಪ್ಪು-ಅನ್ನ ಬೇಯಿಸಿ ತಿನ್ನಿಸುತ್ತೇನೆ'' ಎಂದು ಹೇಳಿ ಅಡಿಗೆ ಮಾಡತೊಡಗಿದರು. ಗಡಿಗೆಗಳಿಂದ ಅಕ್ಕಿ, ಆಲೂಗಡ್ಡೆ, ಒಣಗಿದ ಕಾಳಿನ ಸಂಡಿಗೆ, ಎಣ್ಣೆ, ಉಪ್ಪು, ಮಸಾಲೆ ತೆಗೆದುಕೊಂಡು, ಅಡಿಗೆ ಮನೆಗೆ ಹೋಗಿ, ಒಲೆ ಹೊತ್ತಿಸಿ ಅನ್ನಕ್ಕಿಟ್ಟು ಆಲೂಗಡ್ಡೆ ಮತ್ತು ಕರಿದ ಕಾಳು ಸಂಡಿಗೆಗಳಿಂದ ಝೋಲ್ (ತರಕಾರಿಗಳನ್ನು ಬೇಯಿಸಿ ಮಾಡುವ ಪದಾರ್ಥ) ತಯಾರಿಸಿದರು. ನಾನೂ ಸ್ವಲ್ಪ ಸಹಾಯ ಮಾಡಿದೆ.

''ನನಗೆ ಗಂಗಾಸ್ನಾನ ಮಾಡಿ ಬರಲು ಹೇಳಿದರು. ನಾನು ಸ್ನಾನ ಮಾಡಿ ಬರುವಷ್ಟರಲ್ಲಿ ಅವರು ಗೋಪಾಲನಿಗೆ ನೈವೇದ್ಯ ಮಾಡಿದರು. ನಂತರ ನನ್ನೊಂದಿಗೆ ಅವರೂ ಊಟಕ್ಕೆ ಕುಳಿತರು. ಆ ದಪ್ಪಕ್ಕಿ ಅನ್ನ ಹಾಗೂ ಝೋಲ್ ತಿನ್ನಲು ಅದೆಷ್ಟು ರುಚಿಯಾಗಿತ್ತು! ಊಟ ಮುಗಿಸಿ, ಪಾತ್ರೆ ತೊಳೆದಿಟ್ಟು ಅವರ ಬಳಿ ಬಂದು ಕುಳಿತೆ. ಗೋಪಾಲೇರ್ ಮಾ ನನಗೊಂದು ಚಾಪೆ ಹಾಸಿ, ಅವರು ಮತ್ತೊಂದು ಚಾಪೆಯಲ್ಲಿ ಕುಳಿತರು. ಶ್ರೀರಾಮಕೃಷ್ಣರೊಂದಿಗೆ ತಮಗಿದ್ದ ಸ್ನೇಹ-ವಾತ್ಸಲ್ಯ ಹಾಗೂ ಇತರ ಅನುಭವಗಳ ಬಗ್ಗೆ ಹೇಳತೊಡಗಿದರು. ರಾಮಕೃಷ್ಣರು 'ಇದನ್ನ ತಿನ್ನುತೀನಿ, ಅದನ್ನ ತಿನ್ನುತೀನಿ' 'ನನಗೋಸ್ಕರ ಇದನ್ನು ಮಾಡಿ ತಾ, ಅದನ್ನು ಮಾಡಿ ತಾ' ಎಂದು ಮಕ್ಕಳಂತೆ ಅದೆಷ್ಟು ಪೀಡಿಸುತ್ತಿದ್ದರು, ಹಾಗೂ ಈಗಲೂ ಕೇವಲ ತಿನ್ನುವ ಮಾತೇ ಅವರದು, ಮುಂತಾಗಿ ಬಹಳಷ್ಟು ಮಾತಾಡಿದರು. ಗೋಪಾಲೇರ್ ಮಾ ಅವರ ಪ್ರೀತಿ ಹಾಗೂ ಸರಳತೆಯೇ ಸಾಕಾರಗೊಂಡಂತಿದ್ದ ಮುಖಭಾವ, ಅಮೃತ ಮಯವಾದ ಅವರ ಮಾತುಕತೆ ಇವನ್ನು ಕೇಳಿ ನಾನು ಮಂತ್ರ ಮುಗ್ಧನಾದೆ. ನನಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿ, ಅವರೂ ವಿಶ್ರಮಿಸಿದರು. ಪಾಳುಬಿದ್ದ, ತೇವಹಿಡಿದ ಆ ಮನೆಯು ಭಗವದ್ಭಾವದ ಸ್ಪಂದನಗಳಿಂದ ಆವೃತವಾದ ಒಂದು ಪವಿತ್ರ ಮಂದಿರದಂತೆ ನನಗೆ ಕಂಡುಬಂತು. ರಾಮಕೃಷ್ಣರು ಅಲ್ಲಿ ಜೀವಂತ ವಾಗಿ ನೆಲೆಗೊಂಡಿರುವಂತೆ ಭಾಸವಾಯಿತು. ಅಂಥ ಸನ್ನಿವೇಶದಲ್ಲಿ ನಿದ್ದೆ ಬರುವುದೆ? ಗೋಪಾಲೇರ್ ಮಾ-ಅವರ ಗೋಪಾಲನಲ್ಲೇ ಲೀನಗೊಂಡ ಮನಸ್ಸು, ಭಕ್ತಿಯ ಉತ್ಕಟತೆ, ವೈರಾಗ್ಯ, ಸರಳತೆ, ಸಾಕ್ಷಾತ್ ತಾಯಿ ಯಶೋದೆಯಂತೆ ಎಲ್ಲರನ್ನೂ ಗೋಪಾಲನೆಂದು ಕರೆಯುವುದು ಮತ್ತು ಹಾಗೆಯೇ ಕಾಣುವುದು ಇದನ್ನೇ ಯೋಚಿಸಲಾರಂಭಿಸಿದೆ. ಆಗಲೇ ಸಂಜೆಯಾಗುತ್ತಿರುವುದನ್ನು ಕಂಡು, ಅವರಿಗೆ ನಮಸ್ಕರಿಸಿ, ಅವರ ಆಶೀರ್ವಾದವನ್ನು ಶಿರದಲ್ಲಿ ಹೊತ್ತು, ವಿದಾಯ ಹೇಳಿ ಬಂದೆ.''

ಜಯರಾಂಬಾಟಿಯಿಂದ ಕಾಳೀಕೃಷ್ಣನು ಮಲೇರಿಯಾದ ಯಾವೊಂದು ನಂಜನ್ನು ತಂದಿದ್ದನೋ ಅದಿನ್ನೂ ಸಂಪೂರ್ಣವಾಗಿ ನಿರ್ಮೂಲವಾಗಿರಲಿಲ್ಲ. ಆಗಾಗ ಶರೀರವು ಭಾರವಾದಂತೆಯೂ, ಜ್ವರ ಬಂದಂತೆಯೂ ಆಗುತ್ತಿತ್ತು. ಎಲ್ಲರಿಗೂ ಇದು ತಿಳಿದರೆ ತಾನು ಕೆಲಸ ಮಾಡುವುದೆಲ್ಲಿ ನಿಂತು ಹೋಗುವುದೋ ಎಂದು ಅದನ್ನು ಮುಚ್ಚಿಡುತ್ತಿದ್ದನು. ಮಠದಲ್ಲಿದ್ದು ಕೆಲಸ ಮಾಡದೇ ಸುಮ್ಮನೆ ಕುಳಿತು ಉಣ್ಣಲು ಸಂಕೋಚವೆನಿಸುತ್ತಿತ್ತು. ಜ್ವರ ಕಾಯುತ್ತಿದ್ದಾಗ ಬೇರೆ ವಿಧಿಯಿರುತ್ತಿರಲಿಲ್ಲ; ಪಥ್ಯ ಮಾಡುತ್ತಾ ಸಣ್ಣಪುಟ್ಟ ಕೆಲಸಕ್ಕಿಳಿದುಬಿಡುತ್ತಿದ್ದನು. ಯಾರು ಬೇಡವೆಂದರೂ ಕೇಳುತ್ತಿರಲಿಲ್ಲ. ಇದರಿಂದ ಕೆಲವೊಮ್ಮೆ ಬೈಗುಳವನ್ನೂ ತಿನ್ನಬೇಕಾಗುತ್ತಿತ್ತು.

* * *

೧೯೦೭ರ ಬೇಸಿಗೆ ಇನ್ನೇನು ಕೊನೆಯಾಗುತ್ತಲಿದೆ. ಮಳೆಗಾಲದ ಕೆಲವು ತಿಂಗಳನ್ನು ಕಳೆಯಲೆಂದು ಶ್ರೀಮಾತೆಯವರು ಬೇಲೂರಿನ ನೀಲಾಂಬರ ಮುಖ್ಯೋಪಾಧ್ಯಾಯರ ತೋಟದ ಮನೆಯಲ್ಲಿದ್ದಾರೆ. ಸ್ವಾಮಿ ಯೋಗಾನಂದರು ಅಲ್ಲಿ ಮುಖ್ಯ ಸೇವಕರು; ಜೊತೆಗೆ ಶಾರದಾ ಮಹಾರಾಜರೂ ಇದ್ದಾರೆ. ಗೋಲಾಪ್ ಮಾ ಮತ್ತು ಯೋಗಿನ್ ಮಾ ತಾಯಿಯೊಡನೆಯೇ ಇದ್ದರು. ಒಂದು ದಿನ ಕಾಳೀಕೃಷ್ಣನು ಶ್ರೀಮಾತೆಯವರ ದರ್ಶನಕ್ಕಾಗಿ ಆಲಂಬಜಾರ್ ಮಠದಿಂದ ಬೇಲೂರಿಗೆ ಬಂದನು. ಶ್ರೀಮಾತೆ ಅವನಿಗೆ ರಾತ್ರಿ ಅಲ್ಲೇ ತಂಗಲು ಹೇಳಿದರು. ಮಾರನೇ ದಿನ ಮಠಕ್ಕೆ ಹಿಂತಿರುಗಲೆಂದು ತಾಯಿಗೆ ನಮಸ್ಕರಿಸಲು ಹೋದಾಗ, ಅವರು ಕರುಣೆ ತುಂಬಿದ ಸ್ವರದಲ್ಲಿ,''ಮಗು, ನಿನ್ನನ್ನು ನೋಡಿ ನನಗೆ ಬಹಳ ಸಂಕಟವಾಯಿತು. ನಿನ್ನ ಶರೀರ ಮೊದಲು ಎಷ್ಟು ಗುಂಡುಗುಂಡಗೆ ಇತ್ತು! ಮಲೇರಿಯಾದಿಂದ ನರಳಿ ನರಳಿ ನಿನ್ನ ಶರೀರ ಕ್ಷೀಣವಾಗಿ ಹೇಗಾಗಿಬಿಟ್ಟಿದೆ! ಅವರುಗಳಾದರೋ ಫಕೀರ ಸಾಧುಗಳು. ನಿನಗೆ ಚೆನ್ನಾಗಿ ಏನನ್ನು ತಿನ್ನಿಸಬಲ್ಲರು? ನೀನು ನಿನ್ನ ಮನೆಗೆ ಹೋಗಿ, ಅಲ್ಲಿದ್ದುಕೊಂಡು ಔಷಧೋಪಚಾರ ಮಾಡಿಕೋ, ಪುಷ್ಟಿಕರವಾದ ಆಹಾರ ಸೇವಿಸಿ ಶರೀರವನ್ನು ಮೊದಲು ಸುಸ್ಥಿತಿಗೆ ತಂದುಕೋ'' ಎಂದರು.

ಇದೆಂಥ ಅನಿರೀಕ್ಷಿತ ಆದೇಶ! ಕಾಳೀಕೃಷ್ಣನು ದುಃಖದಿಂದ ಸ್ತಂಭೀಭೂತನಾದ. ಯಾವ ಮನೆಯು ಹೆಬ್ಬುಲಿಯಂತೆ ಭಯಂಕರವೆನಿಸುತ್ತಿತ್ತೋ ಅಲ್ಲಿಗೇ ಹಿಂತಿರುಗಿ ಹೋಗುವುದೆ? ಏನು ಮಾಡುವುದೆಂದೇ ತೋಚದಾಯಿತು. ಅವನ ಮೌನವನ್ನು ಕಂಡು ಶ್ರೀಮಾತೆ ಮತ್ತೆ ಹೇಳಿದರು, ''ಹೌದಪ್ಪ! ನಾನು ಹೇಳಿದ

ಹಾಗೆಯೇ ಮಾಡು. ಅದರಿಂದ ನಿನಗೆ ಒಳ್ಳೆಯದೇ ಆಗುವುದು.''

ಕಾಳೀಕೃಷ್ಣನು ಈಗ ನಿಧಾನವಾಗಿ ಕೇಳಿದ, ''ಅಮ್ಮಾ, ನೀವು ನನಗೆ ಮನೆಗೆ ಹೋಗಲು ಹೇಳುತ್ತಿದ್ದೀರಿ. ಅಲ್ಲಿ ನಾನು ಏನನ್ನು ಅವಲಂಬಿಸಿ ಕಾಲ ಕಳೆಯಲಿ?''

ಅದಕ್ಕೆ ಶ್ರೀಮಾತೆ, ''ಏಕೆ? ಪೂಜೆ, ಸ್ತೋತ್ರ, ಜಪ-ಧ್ಯಾನ ಇವುಗಳನ್ನು ಅವಲಂಬಿಸಿಕೊಂಡಿರು'' ಎಂದರು.

ಕಾಳೀಕೃಷ್ಣನಿಗೆ ಇನ್ನೇನೂ ಹೇಳಲಾಗಲಿಲ್ಲ. ದುಃಖದಿಂದ ಅವನ ಕಂಠ ಗದ್ಗದವಾಯಿತು. ಶ್ರೀಮಾತೆಯವರ ಮುಂದೆ ಅದನ್ನು ತೋರ್ಪಡಿಸಿಕೊಳ್ಳಲಿಚ್ಛಿಸದೆ, ಅಲ್ಲಿಂದ ಬೇಗನೆ ಹೊರ ಬಂದು, ಏಕಾಂತದಲ್ಲಿ ಬಹಳ ಹೊತ್ತು ಅತ್ತನು. ಅಂತರ್ಯಾಮಿನಿಯಾದ ಜನನಿಯು ಕಾಳೀಕೃಷ್ಣನ ಮನಸ್ಥಿತಿಯನ್ನು ಅರಿತರೂ ತಮ್ಮ ಆಜ್ಞೆಯನ್ನೇನೂ ಬದಲಾಯಿಸಲಿಲ್ಲ. ಅವರು ಗೋಲಾಪ್ ಮಾಗೆ ಹೇಳಿದರು, ''ಅಯ್ಯೋ ಪಾಪ! ಕಾಳೀಕೃಷ್ಣನ ಶರೀರ ನೋಡಿ ಬೆಚ್ಚಿಬಿದ್ದೆ. ಚಿಕ್ಕ ಹುಡುಗ, ಸುಖ-ಸೌಕರ್ಯದಲ್ಲೇ ಬೆಳೆದವನು. ಮಠದಲ್ಲಿ ಅನಾರೋಗ್ಯದಿಂದ ನರಳಿ, ಸೊಪ್ಪುತರಕಾರಿ ಮಾತ್ರ ತಿಂದು, ಪೌಷ್ಟಿಕ ಆಹಾರ ಸಿಗದೆ ಬಡವಾಗಿಬಿಟ್ಟಿದ್ದಾನೆ. ಆದ್ದರಿಂದಲೇ ಮನೆಗೆ ಹೋಗಿ ಕೆಲಕಾಲವಿದ್ದು ತಿಂದುಂಡು ಬರಲಿ ಎಂದು ಹೇಳಿದೆ. ಇದರಿಂದ ಅವನ ಮನಸ್ಸಿಗೆ ಬಹಳ ನೋವಾಗಿದೆಯೆಂದು ತಿಳಿದು ನನಗೂ ಕಣ್ಣುಗಳಲ್ಲಿ ನೀರು ಬರುತ್ತಿದೆ.''

ನಿರ್ಜನ ಪ್ರದೇಶದಲ್ಲಿ ಏಕಾಂಗಿಯಾಗಿ ಅತ್ತೂ ಅತ್ತೂ ಹೃದಯದ ಭಾರ ಸ್ವಲ್ಪ ಇಳಿದ ಮೇಲೆ ಕಾಳೀಕೃಷ್ಣನು ಹೊರ ಕೊಠಡಿಯಲ್ಲಿ ಬಂದು ಕುಳಿತನು. ಗೋಲಾಪ್ ಮಾಳಿಂದ ಕಾಳೀಕೃಷ್ಣನ ವಿಷಯ ತಿಳಿದ ಯೋಗಿನ್ ಮಹಾರಾಜರು ಅವನನ್ನು ಸಮಾಧಾನ ಪಡಿಸುತ್ತಾ, ''ನಿನಗೆ ದೀಕ್ಷೆ ಆಗಿದೆಯೆ?'' ಎಂದು ಕೇಳಿದರು. ಅದಕ್ಕವನು 'ಇಲ್ಲ' ವೆಂದ. ಆಗ ಅವರು, ''ಹಾಗಾದರೆ ಏನನ್ನು ಕುರಿತು ಧ್ಯಾನ-ಜಪ ಮಾಡಲಿ ಎಂದು ಶ್ರೀಮಾತೆಯವರನ್ನು ಕೇಳಿಕೊಳ್ಳಲಿಲ್ಲವೇಕೆ? ನಾಳೆ ಬೆಳಗ್ಗೆ ಸ್ನಾನ ಮಾಡಿದ ನಂತರ ಅವರನ್ನು ಕೇಳಿಕೊ'' ಎಂದರು.೧

ಮಾರನೇ ದಿನ ಬೆಳಗ್ಗೆ ಶ್ರೀಮಾತೆ ಪೂಜೆಮುಗಿಸಿ ಕುಳಿತಿದ್ದಾಗ ಕಾಳೀಕೃಷ್ಣನು ಅವರಿಗೆ ಪ್ರಣಾಮ ಸಲ್ಲಿಸಿ, ಯೋಗಿನ್ ಮಹಾರಾಜರು ಹೇಳಿಕೊಟ್ಟಂತೆ ಅವರ ಬಳಿ ತನ್ನ ಅಭಿಲಾಷೆಯನ್ನು ತಿಳಿಸಿದ. ಆಗ ಶ್ರೀಮಾತೆಯವರು ಕೃಪೆ ಮಾಡಿ ಅವನಿಗೆ ಮಂತ್ರದೀಕ್ಷೆಯನ್ನು ನೀಡಿ, ಸಾಧನೆಯ ವಿಧಾನವನ್ನು ಉಪದೇಶಿಸಿದರು.

ಅಲ್ಲಿಯವರೆಗೂ ಕಾಳೀಕೃಷ್ಣನು ಯಾವ ಭಾವವನ್ನು ಅವಲಂಬಿಸಿಕೊಂಡು ಧ್ಯಾನ-ಚಿಂತನೆಯನ್ನು ನಡೆಸಿಕೊಂಡು ಬಂದಿದ್ದನೋ ಅದಕ್ಕಿಂತ ಶ್ರೀಮಾತೆ ತಿಳಿಸಿಕೊಟ್ಟ ಸಾಧನೆಯ ವಿಧಾನ ಭಿನ್ನವಾಗಿದ್ದುದನ್ನು ಕಂಡು ಅವನು ದಿಗ್ಭ್ರಾಂತನಾದ. ಅದನ್ನೂ ಅವನು ಶ್ರೀಮಾತೆಯವರ ಬಳಿ ಹೇಳಿಕೊಂಡ. ಅವರು ಅದನ್ನು ಕೇಳಿ, ''ನೀನು ಮಾಡುತ್ತಿರುವುದಕ್ಕಿಂತ ಇದೇ ಒಳ್ಳೆಯದು'' ಎಂದರು.

ಏನಾಶ್ಚರ್ಯ, ಶ್ರೀಮಾತೆಯವರು ಹೀಗೆ ಹೇಳಿದೊಡನೆಯೇ ಕಾಳೀಕೃಷ್ಣನ ಹೃದಯದಲ್ಲಿದ್ದ ದ್ವಂದ್ವಗಳೆಲ್ಲ ನಿಮಿಷಾರ್ಧದಲ್ಲಿ ಮಾಯವಾದವು. ಅಲ್ಲದೆ, ಜೊತೆ ಜೊತೆಗೇ ಅವರು ಉಪದೇಶಿಸಿದ ವಿಧಾನವು ಹೃದಯವನ್ನು ತುಂಬಿಕೊಂಡಿತು. ಅಲ್ಲಿಯವರೆಗೆ ಮನೆಗೆ ಮರಳಬೇಕಲ್ಲ ಎಂದು ಇದ್ದಂತಹ ಅಸಹನೀಯ ಯಾತನೆಯೂ ಈಗ ದೂರವಾಯಿತು. ಈಗ ಮನೆಯು ತನ್ನ ಸಾಧನೆಗೆ ಅನುಕೂಲಕರವಾದ ಸ್ಥಳ ಎಂದೆನಿಸಿತು. ಕಾಳೀಕೃಷ್ಣನು ಕೂಡಲೇ ಮನದಲ್ಲಿ ಹೀಗೆಂದು ದೃಢಪ್ರತಿಜ್ಞೆ ಮಾಡಿಕೊಂಡ, 'ಶ್ರೀಮಾತೆಯವರು ಮನೆಗೆ ಹೋಗಿ ಧ್ಯಾನ, ಪೂಜೆ, ಪಠನಗಳನ್ನು ಮಾಡುತ್ತ ಕಾಲ ಕಳೆ ಎಂದಿದ್ದಾರೆ. ಈಗಿನಿಂದ ಭಗವಂತನ ಸಾಕ್ಷಾತ್ಕಾರವಾಗುವವರೆಗೂ ಇತರ ಕೆಲಸಗಳನ್ನೆಲ್ಲ ಬದಿಗೊತ್ತಿ, ಶ್ರೀಮಾತೆಯವರು ಹೇಳಿಕೊಟ್ಟಂತೆ ಕೇವಲ ಪೂಜೆ-ಸ್ತೋತ್ರ, ಜಪ-ಧ್ಯಾನಗಳಲ್ಲಿ ಮಾತ್ರ ನಿರತನಾಗಿರುತ್ತೇನೆ.'

'ಕಾಳೀಕೃಷ್ಣನು ಪ್ರಸಾದ ತಿಂದು ಸಂಜೆ ಹೊರಡಲಿ' ಎಂದು ಶ್ರೀಮಾತೆಯವರು ಹೇಳಿಕಳುಹಿಸಿದ್ದರಿಂದ ಅವನೂ ಹಾಗೆಯೇ ಮಾಡಿದ. ಕಾಳೀಕೃಷ್ಣನ ಸ್ವಂತ ಮಾತುಗಳಲ್ಲಿ ಬೀಳ್ಕೊಡುಗೆಯ ಸನ್ನಿವೇಶ ಹೀಗಿದೆ:

''ಆಗ ಮಳೆಗಾಲ. ಜುಲೈ ಇರಬಹುದು. ಸಂಜೆ ಕತ್ತಲಿಡುತ್ತಾ ಬರುತ್ತಿತ್ತು; ತುಂತುರು ಮಳೆಯಾಗುತ್ತಿತ್ತು. ತುಂಬಿದ ಗಂಗೆಯು ಮಂಜಿನಿಂದ ಆವೃತವಾಗಿತ್ತು. ದಿವ್ಯಾನಂದದಿಂದ ತುಂಬಿದ ಮಠವನ್ನು ಬಿಟ್ಟು ಮನೆಗೆ ಹೋಗುವುದು, ಒಂದು ಪ್ರಪಂಚದಿಂದ ಬೇರೊಂದು ಪ್ರಪಂಚಕ್ಕೆ ಹೋದಂತೆ. ಇದನ್ನು ನೆನೆದು ಹೃದಯ ಚಡಪಡಿಸಲಾರಂಭಿಸಿತು. ಶ್ರೀಮಾತೆ ಅಭಯವನ್ನೇನೋ ಇತ್ತಿದ್ದಾರೆ, ನಿಜ. ಆದರೂ ಮನಸ್ಸು ಒಪ್ಪುತ್ತಿಲ್ಲ. ಬಹಳ ದಿಗಿಲಾಗುತ್ತಿದೆ. ಹೊರಗಿನ ಪ್ರಕೃತಿಯೂ ಸಹ ನನ್ನ ಆಂತರ್ಯವನ್ನು ಪ್ರತಿಬಿಂಬಿಸುವಂತಿತ್ತು. ಭಾರವಾದ ಮನಸ್ಸಿನಿಂದ ಶ್ರೀಮಾತೆಗೆ ಸಾಷ್ಟಾಂಗ ಪ್ರಣಾಮ ಮಾಡಿ ಹೇಳಿದೆ, 'ಅಮ್ಮಾ, ಹಾಗಾದರೆ ನಾನಿನ್ನು ಬರುತ್ತೇನೆ.' ಶ್ರೀಮಾತೆಯವರು, 'ಹೋಗಿ ಬಾ ಮಗು, ಆಗಾಗ ಬರುತ್ತಿರು. ಯಾವುದರಿಂದ ಆರೋಗ್ಯ ಉತ್ತಮಗೊಳ್ಳುವುದೋ ಹಾಗೆಯೇ ಮಾಡು' ಎಂದು ಹೇಳಿ ನನ್ನ ಗಲ್ಲವನ್ನು ಸ್ಪರ್ಶಿಸಿ ಮುದ್ದಿಟ್ಟರು. ಅವರಿಂದ ಬೀಳ್ಕೊಂಡು, ಪಕ್ಕದ ಖೆಯಾ ಘಾಟಿನಲ್ಲಿ ನೌಕೆಯನ್ನು ಏರಿದೆ. ನೌಕೆ ವರಾಹನಗರದತ್ತ ಹೊರಟು, ನೀಲಾಂಬರ ಮುಖ್ಯೋಪಾಧ್ಯಾಯರ ತೋಟದ

---

೧ ಶ್ರೀಮಾತೆಯವರು ಮಂತ್ರದೀಕ್ಷೆ ನೀಡುತ್ತಾರೆಂಬ ವಿಷಯ ಕಾಳೀಕೃಷ್ಣನಿಗೆ ಅದುವರೆಗೂ ತಿಳಿದೇ ಇರಲಿಲ್ಲ. ಅವರುಗಳ ಗುಂಪಿನವನಾದ ಖೇಲಾತ್ ಎಂಬುವನು ಇದಕ್ಕೆ ಮೊದಲೇ ಜಯರಾಂಬಾಟಿಗೆ ಹೋಗಿ ಶ್ರೀಮಾತೆಯವರಿಂದ ದೀಕ್ಷೆ ಪಡೆದಿದ್ದ. ಆದರೆ ಬಹಿರಂಗಪಡಿಸಿರಲಿಲ್ಲ. ಖಗೇನನ ದಳದವರು ಮಂತ್ರದೀಕ್ಷೆಯನ್ನು ಪಡೆದಾಗ ಅದನ್ನು ಗೋಪ್ಯವಾಗಿಯೇ ಇಡುತ್ತಿದ್ದರು. ವಿಷಯ ಹೊರಬಿದ್ದಾಗ ಸುಧೀರನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದಾರೆ ಎಂಬುದು ತಿಳಿದುಬಂತು.

ಮನೆಯ ಮುಂದೆಯೇ ಉತ್ತರ ದಿಕ್ಕಿನಲ್ಲಿ ಸಾಗಿತು. ಸಂಜೆಯ ನಸುಗತ್ತಲಿನಲ್ಲಿ ಶ್ರೀಮಾತೆಯವರು ಬಿಸಿಲುಮಚ್ಚಿನಲ್ಲಿ ಗಂಗೆ ಯೆಡೆಗೆ ತಿರುಗಿ, ದೃಷ್ಟಿಗೋಚರವಾಗುವವರೆಗೂ ನೌಕೆಯನ್ನು ನೋಡುತ್ತ ನಿಂತಿದ್ದುದನ್ನು ಕಂಡೆ. ನನ್ನ ಹೃದಯ ಅತೀವ ತಳ ಮಳಗೊಂಡು, ಏನೇನೋ ಆಲೋಚನೆಗಳು ಬರತೊಡಗಿದವು. ಶ್ರೀಮಾತೆಯವರು ಮಳೆಯಲ್ಲಿ ಹಾಗೇ ನಿಂತಿದ್ದುದನ್ನು ಕಂಡು, ಗೋಲಾಪ್ ಮಾ ಅದಕ್ಕೆ ಕಾರಣವನ್ನು ಕೇಳಿದಾಗ ಅವರು ಕಣ್ಣಲ್ಲಿ ನೀರು ತುಂಬಿ, 'ಅಯ್ಯೋ ಪಾಪ! ಕಾಳೀಕೃಷ್ಣನ ಮನಸ್ಸಿಗೆ ಎಷ್ಟೊಂದು ಸಂಕಟವಾಗಿರಬಹುದೆಂದು ಯೋಚಿಸುತ್ತ ಅವನನ್ನೇ ನೋಡುತ್ತಿದ್ದೆ' ಎಂದಿದ್ದರು ಎಂದು ಅನಂತರ ತಿಳಿದುಬಂತು.''

೬

ಮತ್ತದೇ ಮನೆ!

ಕಾಳೀಕೃಷ್ಣನು ತಾಯ್ತಂದೆಯರಿಗೆ, ''ಶರೀರಾರೋಗ್ಯ ಸುಧಾರಿಸಿಕೊಳ್ಳುವ ಸಲುವಾಗಿ ಸ್ವಲ್ಪ ದಿನ ಮನೆಯಲ್ಲಿರಲು ಬಂದೆ!'' ಎಂದನು. ತಂದೆಯು ವೈದ್ಯನಾದ್ದರಿಂದ ಔಷಧಿ ಪಥ್ಯಾದಿಗಳ ವ್ಯವಸ್ಥೆಯಾಗಲು ಹೆಚ್ಚು ತಡವಾಗಲಿಲ್ಲ. 'ಕಾಳಿ ವಾಪಸ್ಸು ಬಂದಿದ್ದಾನೆ' ಎಂಬ ಸುದ್ದಿ ತಾತನಿಗೂ ತಲುಪಿತು. ಆತನಿಗಾದ ಆನಂದ ಎಲ್ಲರಿಗಿಂತಲೂ ಹೆಚ್ಚು. ಆತನೆಂದುಕೊಂಡ, 'ಈ ಬಾರಿ ಏನಾದರಾಗಲಿ, ಕಾಳಿಯನ್ನು ಮತ್ತೆ ಹೋಗಲು ಬಿಡುವುದಿಲ್ಲ' ಎಂದು.[೨] ಇದನ್ನು ಕೇಳಿದ ಸರ್ವಾಂತರ್ಯಾಮಿ ಮತ್ತೊಮ್ಮೆ ನಕ್ಕ.

ತಮ್ಮ-ತಂಗಿಯರು ಪ್ರೀತಿಯ ಹಿರಿಯಣ್ಣನನ್ನು ಮತ್ತೆ ಕಂಡು ಆನಂದದಿಂದ ಉಬ್ಬಿದರು. ಆದರೆ ತಾಯ್ತಂದೆಯರು ತಮ್ಮ ಆವೇಗವನ್ನು ತೋರ್ಪಡಿಸಲಿಲ್ಲ. ಒಮ್ಮೊಮ್ಮೆ ಅವರಿಗೆ ಮಗನನ್ನು ಹಿಂತಿರುಗಿ ಪಡೆದೇಬಿಟ್ಟೆವು ಎಂದೆನಿಸುತ್ತಿತ್ತು; ಆದರೂ ಹೃದಯ ಚೀರಿ ಹೇಳುತ್ತಿತ್ತು, 'ಇಲ್ಲ ಇಲ್ಲ, ಹೀಗಾದೀತೆ? ಕಾಡಿನ ಹಕ್ಕಿಯು ಪಂಜರದಲ್ಲಿರುವುದು ಸಾಧ್ಯವೆ?'

ಮನೆಯಲ್ಲಿ ಅವನ ಆರೋಗ್ಯವು ಸುಧಾರಿಸಿಕೊಳ್ಳತೊಡಗಿತು. ಶ್ರೀಮಾತೆ ಯಾವುದನ್ನು ಅವಲಂಬಿಸಿಕೊಂಡಿರಲು ಹೇಳಿದ್ದರೋ, ಆ ಕಡೆಗೇ ಕಾಳೀಕೃಷ್ಣನು ಮನಸ್ಸನ್ನಿಡತೊಡಗಿದನು. ಮನೆಯಲ್ಲಿಟ್ಟಿದ್ದ ಶ್ರೀರಾಮಕೃಷ್ಣರ ಪಟಕ್ಕೆ ನಡುವಿನ ತಮ್ಮನಾದ ವಿಜಯನು ಪೂಜೆ ಸಲ್ಲಿಸುತ್ತಿದ್ದನು; ತಾಯಿ ಅದಕ್ಕೆ ಅಣಿಮಾಡಿಕೊಡುತ್ತಿದ್ದಳು. ಕಾಳೀಕೃಷ್ಣನೀಗ ಆ ಪೂಜೆಯ ಭಾರವನ್ನು ವಹಿಸಿಕೊಂಡನು. ತನ್ನ ಕೊಠಡಿಯಲ್ಲಿ ಬಾಗಿಲು ಹಾಕಿಕೊಂಡು ಜಪ-ಧ್ಯಾನಾದಿಗಳನ್ನು ಮಾಡಲಾರಂಭಿಸಿದನು. ಅವನ ಆರೋಗ್ಯ ಉತ್ತಮಗೊಂಡಂತೆ ಸಾಧನೆಯ ಸಮಯವೂ ಹೆಚ್ಚತೊಡಗಿತು. ಕಡೆಗೆ ಪೂಜೆ-ಸ್ತೋತ್ರ- ಜಪ-ಧ್ಯಾನ ಇವುಗಳಲ್ಲಿ ದಿನವೂ ೧೪ ಗಂಟೆಗಳ ಕಾಲ ಕಳೆಯುವುದಾಗಿ ನಿಯಮವಿಟ್ಟುಕೊಂಡನು. ಜಪದ ಸಂಖ್ಯೆಯು ೧೦ ಸಾವಿರದಿಂದ ಪ್ರಾರಂಭವಾಗಿ ಕೊನೆಗೆ ೮೫ ಸಾವಿರಕ್ಕೂ ಮುಟ್ಟುತ್ತಿತ್ತು. ಕೆಲವೊಂದು ದಿನ ಸಂಖ್ಯೆಯು ಒಂದು ಲಕ್ಷದ ಎಂಟು ಸಾವಿರಕ್ಕೂ ಮುಟ್ಟುತ್ತಿತ್ತು. ಈ ರೀತಿಯ ಸಾಧನೆಯಿಂದಾಗಿ ಆಂತರ್ಯದಲ್ಲಿ ಒಂದು ರೀತಿಯ ಗಭೀರವಾದ ಆನಂದದ ಅನುಭವವಾಗತೊಡಗಿತು. ಧ್ಯಾನ ಮಾಡುತ್ತ ಮಾಡುತ್ತ ಮನಸ್ಸಿನಲ್ಲಿ ಸುಂದರವಾದ ಉದಾತ್ತ ಭಾವನೆಗಳು ಸ್ಫುರಿಸುತ್ತಿದ್ದವು. ಇವುಗಳ ಆಧಾರದ ಮೇಲೆ ಅವನು ಧ್ಯಾನಾನಂತರ ಹಾಡುಗಳನ್ನು ರಚಿಸುತ್ತಿದ್ದನು. ಹೀಗೆ ಒಂದು ಪುಸ್ತಕದಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಗೀತೆಗಳನ್ನು ಬರೆದಿದ್ದನು. ಜಪ-ಧ್ಯಾನ ಮಾಡಿ ಆಯಾಸವೆನಿಸಿದಾಗ ಕಾಳೀಪ್ರಸನ್ನ ಸಿಂಹನಿಂದ ರಚಿಸಲ್ಪಟ್ಟ ಮಹಾಭಾರತ, ಶ್ರೀಮದ್ಭಾಗವತ ಮತ್ತಿತರ ಪುರಾಣಗಳನ್ನು ಓದುತ್ತಿದ್ದನು. ಮಲಗುವಾಗ ರಾತ್ರಿ ಸಾಮಾನ್ಯವಾಗಿ ೧೨ ಗಂಟೆಯೇ ಆಗಿಬಿಡುತ್ತಿತ್ತು. ಕೆಲವೊಮ್ಮೆ ಜಪದ ಸಂಖ್ಯೆಯನ್ನು ಪೂರ್ತಿಗೊಳಿಸುವಾಗ ರಾತ್ರಿ ಒಂದು ಗಂಟೆಯೋ ಎರಡು ಗಂಟೆಯೋ ಆಗಿಬಿಡುತ್ತಿತ್ತು. ಹೆಚ್ಚು ಕಡಿಮೆ ಅವನು ಬಾಗಿಲಿಗೆ ಚಿಲಕ ಹಾಕಿಕೊಂಡೇ ಇರುತ್ತಿದ್ದನು. ಮನೆಯಲ್ಲಿ ಯಾರೊಂದಿಗೂ ಬೆರೆಯುತ್ತಿರಲಿಲ್ಲ; ಯಾವ ಮಾತುಕತೆಗೂ ಹೋಗುತ್ತಿರಲಿಲ್ಲ.

*(ಮುಂದುವರಿಯುವುದು)*

೨ ಮೊಮ್ಮಗನನ್ನಂತೂ ಹಿಡಿದಿಡಲಾಗಲೇ ಇಲ್ಲ. ಅಲ್ಲದೆ, ಹಿರಿಯ ಮಗನಾದ ತ್ರೈಲೋಕ್ಯನಾಥನೂ ೧೯೦೦ರಲ್ಲಿ ದೈವಾಧೀನನಾದ. ವೃದ್ಧನು ಮಗನ ಮರಣದ ನಂತರ ಒಂದು ವರ್ಷ ಕಾಲ ಜೀವಿಸಿದ್ದು, ೧೯೦೧ರಲ್ಲಿ ತನ್ನ ೮೦ನೇ ವಯಸ್ಸಿನಲ್ಲಿ ಮೃತ್ಯುವಶನಾದ. ಕೊನೆಗಾಲದಲ್ಲಿ ಆಸ್ತಮಾ ರೋಗದಿಂದ ತುಂಬ ಕಷ್ಟಪಟ್ಟಿದ್ದ. ಶ್ಯಾಮ್‌ಬಜಾರಿನ ನಿಕಾಸಿಪಾಡಾದ ಅಪ್ಪರ್ ಸರ್ಕ್ಯುಲರ್ ರೋಡ್ ಮತ್ತು ರಾಜಾ ದೀನೇಂದ್ರ ಸ್ಟ್ರೀಟನ್ನು ಕೂಡಿಸುವ 'ರಾಮ್‌ರತನ್ ಬೋಸ್ ಲೇನ್' ಎಂಬುದು ಈತನ ಹೆಸರಿನಲ್ಲೇ ಆದದ್ದು. ಈ ಜಾಗದಲ್ಲಿ ಆತನ ಕೆಲವು ಬಿಘಾ ಜಮೀನಿತ್ತು.

**ಶ್ರಮಜೀವಿಯೊಬ್ಬ ಸತ್ತುಹೋದ. ಸ್ವರ್ಗಕ್ಕೆ ಹೋದಾಗ ಅವನು ದೇವರನ್ನು ಕೇಳಿದ, ''ಮನುಷ್ಯ ಮುದುಕನಾಗುತ್ತಾನಲ್ಲ, ಇದೇನು ನಿನ್ನ ಆಟ? ಒಂದೊಂದಾಗಿ ನಮ್ಮ ದೈಹಿಕ ಶಕ್ತಿಯನ್ನೆಲ್ಲ ಕಸಿದುಕೊಳ್ಳುವೆಯಲ್ಲ - ನಮ್ಮ ಶಕ್ತಿ, ಚೈತನ್ಯ, ವೇಗ, ಸಾಮರ್ಥ್ಯ ಎಲ್ಲವನ್ನೂ? ಕೊನೆಗೆ ನಮ್ಮ ಎಲ್ಲವನ್ನೂ ಕಳೆದುಕೊಂಡು ಎಲುಬಿನ ಹಂದರವಾಗಿ ಚರ್ಮ ಜೋತಾಡುವ ವರೆಗೂ ನೀನು ಬಿಡಲಾರೆ. ಇದೇಕೆ ಹೀಗೆ ಮಾಡುವೆ?''**

**ಅದಕ್ಕೆ ದೇವರು ಉತ್ತರ ಕೊಟ್ಟ: ''ಮಗೂ, ಮುದುಕನಾಗುವುದು ಶಾಪವಲ್ಲ, ಅದು ನಿಮಗೆ ನಾನು ಕೊಟ್ಟ ವರದಾನ. ಅದರಿಂದ ನೀವು ಬೆಳೆಯುವಿರಿ, ಬುದ್ಧಿವಂತರಾಗುವಿರಿ. ನೀವು ದೇಹವಲ್ಲ, ನೀವು ಈ ಜಗತ್ತಿಗೆ ಸೇರಿದವರಲ್ಲ, ನೀವು ಭಗವಂತನಾದ ನನಗೇ ಸೇರಿದವರಾಗಿದ್ದೀರಿ ಎಂದು ತಿಳಿದುಕೊಳ್ಳುವಿರಿ.''**

**ಶ್ರಮಜೀವಿಗೆ ಸಂತೋಷವಾಯಿತು. ದೇಹಕ್ಕೆ ಮುಪ್ಪು ಬಂದರೂ, ಮೈಯಲ್ಲಿ ಶಕ್ತಿಯಿಲ್ಲದಾದರೂ ಅದರಿಂದೇನು? ಒಬ್ಬನಿಗೆ ಶ್ರದ್ಧೆ, ಅರಿವು, ತಾಳ್ಮೆ, ಸಹನೆ ಇವುಗಳು ವಯಸ್ಸಾದಾಗಲೇ ಮೂಡುವುದಲ್ಲವೆ?**

*(ಜೆ.ಪಿ. ವಾಸ್ವಾನಿಯವರ 'Immortal Stories' ಗ್ರಂಥದಿಂದ)*




# ಶ್ರೀ ವಿದ್ಯಾರಣ್ಯರ ಜೀವನ್ಮುಕ್ತಿವಿವೇಕ




*ಕೃತಿ :* **ಜೀವನ್ಮುಕ್ತಿವಿವೇಕ**
*ಲೇಖಕರು :* **ಸ್ವಾಮಿ ಹರ್ಷಾನಂದ**
*ಪ್ರಕಾಶಕರು :* **ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು - 570 020**
*ಪುಟಗಳು :* **384** *ಬೆಲೆ :* **175/-**

ಶ್ರೀ ವಿದ್ಯಾರಣ್ಯ ಮುನಿಗಳ ಸುಪ್ರಸಿದ್ಧ ಅದ್ವೈತ ಕೃತಿ **'ಜೀವನ್ಮುಕ್ತಿವಿವೇಕ'**ದ ಕನ್ನಡಾನುವಾದ ಸಹಿತ ಆವೃತ್ತಿಯನ್ನು ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಶ್ರೀಮತ್ ಸ್ವಾಮಿ ಹರ್ಷಾನಂದಜಿ ಮಹಾರಾಜ್ ಅವರು ರಚಿಸಿದ್ದು, ಅದರ ನಾಲ್ಕನೇ ಮುದ್ರಣವನ್ನು ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಇತ್ತೀಚೆಗೆ ಪ್ರಕಟಿಸಿದೆ. ಸ್ವಾಮಿ ಆದಿದೇವಾನಂದರು ೧೯೬೭ರ ಪ್ರಥಮ ಮುದ್ರಣಕ್ಕೆ ಬರೆದ ಉಪೋದ್ಘಾತ, ಲೇಖಕರ 'ಬಿನ್ನಹ', ಉದ್ಧೃತ ಶ್ಲೋಕಗಳ ಅನುಕ್ರಮಣಿಕೆಗಳಿಂದ ಅಲಂಕೃತವಾದ ಈ ಹೊಸ ಆವೃತ್ತಿಯಲ್ಲಿ ಸ್ಫುಟವಾದ ಮುದ್ರಣ, ಉತ್ತಮ ರಕ್ಷಾಕವಚ (ಕ್ಯಾಲಿಕೊ) ಹಾಗೂ ಸುಂದರ ರಕ್ಷಾಪುಟಗಳಿದ್ದು, ದೀರ್ಘಕಾಲ ಅಧ್ಯಯನ ಮಾಡುವ ಓದುಗರಿಗೆ ಅನುಕೂಲಕರವಾಗಿದೆ. ಬಹಳ ಕಾಲದಿಂದ ಅನುಪಲಬ್ಧವಾಗಿದ್ದ ಈ ಕೃತಿಯು ಈಗ ಸುಲಭ ಬೆಲೆಗೆ, ಆಕರ್ಷಕ ರೂಪದಲ್ಲಿ ಲಭ್ಯವಾಗಿದೆ.

ಉಪೋದ್ಘಾತದಲ್ಲಿ ಈ ಕೃತಿಯ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದೆ:

''ಜೀವನಮುಕ್ತಿವಿವೇಕವು ಲಲಿತವೂ ಸರಳವೂ ಆದ ಗದ್ಯಶೈಲಿಯಲ್ಲಿ ಬರೆಯಲ್ಪಟ್ಟ ಗ್ರಂಥ. ಮೊದಲಿನಿಂದ ಕೊನೆಯವರೆಗೆ ಸ್ವರಸವಾದ ಸಪ್ರಮಾಣವಾದ ಶ್ಲೋಕರತ್ನಗಳನ್ನು ಗ್ರಂಥಕರ್ತೃಗಳು ಉದಾಹರಿಸಿರುವುದು ಈ ಗ್ರಂಥದ ವೈಶಿಷ್ಟ್ಯವಾಗಿದೆ. ವಿಷಯವು ಪುರಾತನವಾಗಿದ್ದರೂ ವಿದ್ಯಾರಣ್ಯಯತಿಗಳು ತೋರಿಸಿರುವ ಹಾದಿ ಹೊಸದಾಗಿದೆ; ಅನೇಕ ಕಡೆಗಳಲ್ಲಿ ಮನಃಶ್ಶಾಸ್ತ್ರ ದೃಷ್ಟಿಯಿಂದ ಆಂತರಿಕ ಜಗತ್ತಿನ ವಿಶ್ಲೇಷಣವನ್ನು ಮಾಡಿರುತ್ತಾರೆ. ಸ್ವಯಂ ಸಂನ್ಯಾಸಿಗಳಾಗಿರುವ ವಿದ್ಯಾರಣ್ಯರು ಮುಕ್ತಿಗೆ ಸಂನ್ಯಾಸವೇ ಕಾರಣ ಎಂಬ ಮೂಲಭಾವನೆಯನ್ನು ಪ್ರಕಟಗೊಳಿಸಿ ವಿಷಯವನ್ನು ಪ್ರಾರಂಭಿಸುತ್ತಾರೆ. ಸಂನ್ಯಾಸಕ್ಕೆ ನಾನಾ ವಿಧವಾದ ಅರ್ಥಗಳಿದ್ದರೂ ವಿದ್ಯಾರಣ್ಯರಿಗೆ ಒಂದೇ ಒಂದು ಅರ್ಥವಿದೆ; ಸಾಂಪ್ರದಾಯಿಕವಾದ ಪಾರಮಾರ್ಥಿಕವಾದ ಸಂನ್ಯಾಸ; ದಂಡ-ಕಮಂಡಲು-ಕಾಷಾಯಾದಿಗಳನ್ನು ಧರಿಸಿ, ಸರ್ವ-ಕರ್ಮ-ಸಂನ್ಯಾಸ ಮಾಡಿ ಆತ್ಮಲೋಕದಲ್ಲಿಯೇ ಶರಣುವನ್ನು ಹೊಂದಬೇಕು. ಸಂನ್ಯಾಸವು ಎರಡು ಬಗೆಯಾಗಿರುತ್ತದೆ: ವಿವಿದಿಷಾಸಂನ್ಯಾಸ, ವಿದ್ವತ್ಸಂನ್ಯಾಸ; ಮೊದಲನೆಯದು ಎರಡನೆಯದಕ್ಕೆ ಪೂರ್ವಭಾವಿಯಾದ ಅವಸ್ಥೆಯಾಗಿರುತ್ತದೆ. ಶ್ರವಣ-ಮನನ-ನಿದಿಧ್ಯಾಸನಗಳನ್ನು ಅನುಷ್ಠಾನ ಮಾಡುವುದರ ಮೂಲಕ ಪರತತ್ತ್ವವನ್ನು ಅರಿತವರು ಮಾಡುವ ಸಂನ್ಯಾಸವು ವಿದ್ವತ್ಸಂನ್ಯಾಸವು. ಮೊದಲನೆಯದಕ್ಕೆ ಶಾಸ್ತ್ರವಿಧಿಯನ್ನು ಅನುಸರಿಸಬೇಕು. ಎರಡನೆಯದಕ್ಕೆ ವಿಧಿನಿಷೇಧಗಳಿಲ್ಲ. ಸ್ತ್ರೀಯರಿಗೂ ಸಂನ್ಯಾಸಕ್ಕೆ ಅರ್ಹತೆ ಇದೆ ಎಂಬ ಮತವನ್ನು ಪ್ರತಿಪಾದಿಸಿರುವುದು ಈ ಗ್ರಂಥದ ಒಂದು ವಿಶೇಷೋಕ್ತಿ (ಪುಟ ೯).

''ಈ ಗ್ರಂಥವು ಐದು ಪ್ರಕರಣಗಳನ್ನು ಒಳಗೊಂಡಿದೆ; ಜೀವನ್ಮುಕ್ತಿ ಪ್ರಮಾಣ, ವಾಸನಾಕ್ಷಯ, ಮನೋನಾಶ, ಸ್ವರೂಪಸಿದ್ಧಿಪ್ರಯೋಜನ ಮತ್ತು ವಿದ್ವತ್ಸಂನ್ಯಾಸ. ಮೊದಲನೆಯ ಪ್ರಕರಣವು ಅನೇಕ ಪ್ರಮಾಣಗಳ ಮತ್ತು ದೃಷ್ಟಾಂತಗಳ ಮೂಲಕ ಮೇಲೆ ಸೂಚಿಸಿರುವ ಎರಡು ಬಗೆಯ ಸಂನ್ಯಾಸಗಳನ್ನೂ ಸಾಧಿಸುತ್ತದೆ.

''ಎರಡನೆಯ ಪ್ರಕರಣದಲ್ಲಿ ಜೀವನ್ಮುಕ್ತಿಯ ಸಾಧನಗಳನ್ನು ನಿರೂಪಿಸಿದೆ. ತತ್ತ್ವಜ್ಞಾನ, ಮನೋನಾಶ, ವಾಸನಾಕ್ಷಯ - ಈ ಮೂರೂ ಸಾಧನಗಳು. ವಾಸನೆಯ ಸ್ವರೂಪವನ್ನೂ ಅದನ್ನು ಕ್ಷಯಮಾಡುವ ರೀತಿಯನ್ನೂ ಸರಿಯಾಗಿ ಅರಿತುಕೊಂಡರೆ ಮುಕ್ತಿಯು ದೂರವಾಗಲಾರದು. ಈ ಪ್ರಕರಣದಲ್ಲಿ ವಾಸನಾಕ್ಷಯದ ವಿಷಯವನ್ನು ಅತಿಶಯ ಕೌಶಲದಿಂದ ವಿವರಿಸಿದ್ದಾರೆ ವಿದ್ಯಾರಣ್ಯಮುನಿಗಳು. ನವೀನ ಮನಶ್ಶರೀರಶಾಸ್ತ್ರಜ್ಞನಿಗೂ ಇಲ್ಲಿ ಉಪಯುಕ್ತ ಸೂಚನೆಗಳು ಸಿಗುತ್ತವೆ.

‘‘ಮೂರನೆಯ ಪ್ರಕರಣವು ಮನೋನಾಶದ ಕ್ರಮವನ್ನು ವಿವರಿಸುತ್ತದೆ. ವಾಸನೆಗಳೆಲ್ಲ ಕ್ಷಯಿಸಿದಮೇಲೂ ಅವುಗಳು ಸಂಪೂರ್ಣ ನಾಶವಾಯಿತೆಂದು ಹೇಳಲಾಗುವುದಿಲ್ಲ; ಪುನರುತ್ಥಾನಕ್ಕೆ ಎಡೆಯುಂಟು. ಆದರೆ ಮನೋನಾಶವು ಸರಿಯಾಗಿ ಆದಾಗ ವಾಸನಾಕ್ಷಯವು ರಕ್ಷಿತವಾಗುತ್ತದೆ.

‘‘ಸ್ವರೂಪಸಿದ್ಧಿಯ ಅಥವಾ ಜೀವನ್ಮುಕ್ತಿಯ ಪ್ರಯೋಜನವನ್ನು ನಾಲ್ಕನೆಯ ಪ್ರಕರಣವು ವಿವರಿಸುತ್ತದೆ. ಪ್ರಯೋಜನವು ಐದು ಬಗೆಯಾಗಿರುತ್ತದೆ: ೧) ಜ್ಞಾನದ ರಕ್ಷೆ, ೨) ತಪಸ್ಸು, ೩) ವೈಷಮ್ಯದ ಅಭಾವ, ೪) ದುಃಖನಾಶ ಮತ್ತು ೫) ಸುಖಾವಿರ್ಭಾವ. ತತ್ತ್ವಜ್ಞಾನವು ಪ್ರಮಾಣಗಳಿಂದ ಉತ್ಪನ್ನವಾಗಿದ್ದರೂ ಸಂಶಯ-ವಿಪರ್ಯಯಗಳಿಂದ ಅದನ್ನು ಕಾಪಾಡಬೇಕಾಗುತ್ತದೆ.

‘‘ಐದನೆಯ ಪ್ರಕರಣವು ಪ್ರಾರಂಭಿಸಿದ ವಿಷಯವನ್ನು, ಎಂದರೆ, ಸಂನ್ಯಾಸದ ಸ್ವರೂಪವನ್ನು ಉಪಸಂಹರಿಸುತ್ತದೆ. ವಿಶೇಷವಾಗಿ ವಿದ್ವತ್ಸಂನ್ಯಾಸದ ಸ್ವರೂಪವನ್ನು ವಿವರಿಸುತ್ತದೆ.’’

ಕೃತಿಯ ಭಾಷಾಂತರವನ್ನು ಕುರಿತು ಉಪೋದ್ಘಾತದಲ್ಲಿ ಹೀಗೆ ವಿವರಿಸಿದ್ದಾರೆ: ‘‘ಜೀವನ್ಮುಕ್ತಿವಿವೇಕವು ಕನ್ನಡಕ್ಕೆ ಪರಿವರ್ತನವಾಗಿರುವುದು ಇದೇ ಮೊದಲನೆಯ ಸಲ. ಈಗಾಗಲೇ ಅನೇಕ ಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸಿರುವ ಸ್ವಾಮಿ ಹರ್ಷಾನಂದರು ಇದರ ಪರಿವರ್ತನಕಾರರು. ಭಾಷಾಂತರದಲ್ಲಿ ನಿಷ್ಕೃಷ್ಟತೆ, ಸೂಕ್ಷ್ಮತಾದೃಷ್ಟಿ, ಸರಳತೆ, ಪಾಂಡಿತ್ಯ, ಅರ್ಥಗಾಂಭೀರ್ಯ ಎದ್ದು ಕಾಣುತ್ತವೆ. ಇದು ಶುಷ್ಕ ಭಾಷಾಂತರವಾಗಿರದೆ ಸಾಹಿತ್ಯದ ದೃಷ್ಟಿಯಿಂದಲೂ ಲಲಿತವಾಗಿ ಸ್ವರಸವಾಗಿ ಇದೆ. ಅಧ್ಯಾತ್ಮ ಪಿಪಾಸುಗಳಿಗೆ ಈ ಗ್ರಂಥವು ಅತ್ಯಂತ ಉಪಕಾರಿಯಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.’’

ಈ ಕೃತಿಯ ಸುಲಲಿತ ಅನುವಾದಶೈಲಿಯನ್ನು ‘ವಾಸನಾಕ್ಷಯಪ್ರಕರಣ’ದ ಒಂದು ಉದಾಹರಣೆಯ ಮೂಲಕ ಕಂಡುಕೊಳ್ಳಬಹುದಾಗಿದೆ:

ಮೂಲಕೃತಿ :

**ನ ಖಲು ವಾಯುನಾ ದೋಧೂಯಮಾನೇನ ಪ್ರದೀಪೇನ ಮಣಿಮುಕ್ತಾದಿ-ಲಕ್ಷಣಾನಿ ನಿರ್ಧಾರಯಿತುಂ ಶಕ್ಯಂತೇ । ನಾಪಿ ಸ್ಥೂಲೇನ ಖನಿತ್ರೇಣ ಸೂಚ್ಯೇವ ಸೂಕ್ಷ್ಮಪಟ-ಸ್ಯೂತಿಃ ಸಂಭವತಿ। ತದ್ವದೇತದೀದೃಶಂ ಸತ್ತ್ವಮೇವಾಯೋಗಿಷು ತಮೋಗುಣಗರ್ಭಿತೇನ ರಜೋಗುಣೇನೋಪಸ್ಪೃಷ್ಟಂ ಬಹುವಿಧ-ದ್ವೈತಸಂಕಲ್ಪೇನ ಚೇತಯಮಾನಂ ಚಿತ್ತಂ ಭವತಿ । ತಚ್ಚಿತ್ತಂ ತಮೋಗುಣಾಧಿಕ್ಯೇ ಸತ್ಯಾಸುರೀಂ ಸಂಪದಮುಪಚಿನ್ವತ್ಪೀನಂ ಭವತಿ ।**

ಅನುವಾದ :

‘ಗಾಳಿಯಿಂದ ಬಹಳವಾಗಿ ಅಲ್ಲಾಡುತ್ತಿರುವ ಮಣಿ, ಮುಕ್ತಾಫಲ ಮೊದಲಾದವುಗಳ ಲಕ್ಷಣಗಳನ್ನು (ಪರೀಕ್ಷಿಸಿ) ನಿರ್ಧರಿಸಲಾಗುವುದಿಲ್ಲ. ಹಾಗೆಯೇ ಸ್ಥೂಲವಾಗಿರುವ ಗುದ್ದಲಿಯಿಂದ—ಸೂಜಿಯಿಂದಾಗುವಂತೆ— ಸೂಕ್ಷ್ಮವಾದ ಬಟ್ಟೆಗಳನ್ನು ಹೊಲಿಯಲಾಗುವುದಿಲ್ಲ. ಯೋಗಿಗಳಲ್ಲದವರಲ್ಲಿ ಇಂಥ ಸತ್ತ್ವವೇ ತಮೋಗುಣದಿಂದ ಮುಚ್ಚಲ್ಪಟ್ಟ ರಜೋಗುಣದ ಸಂಪರ್ಕ ಹೊಂದಿ ಬಹುವಿಧವಾದ ದ್ವೈತಸಂಕಲ್ಪಗಳ ಮೂಲಕ ಚೈತನ್ಯವನ್ನು ಹೊಂದುವ ಚಿತ್ತವಾಗುತ್ತದೆ. ಅಂಥ ಚಿತ್ತವು ತಮೋಗುಣವು ಹೆಚ್ಚಿದಾಗ ಆಸುರೀಸಂಪತ್ತುಗಳ ಸಂಚಯನದ ಮೂಲಕ ವೃದ್ಧಿ ಹೊಂದುತ್ತದೆ.’ *(ಪು.೧೪೧-೪೨)*

ಈ ಗ್ರಂಥದಲ್ಲಿ ಹಲವು ಕಡೆ ವಿಷಯಗಳ ಸ್ಪಷ್ಟತೆಗಾಗಿ ಅನೇಕ ಟಿಪ್ಪಣಿಗಳನ್ನು ಅನುವಾದಕರು ನೀಡುತ್ತಾರೆ. ಶಾಸ್ತ್ರಾಧ್ಯಯನದಲ್ಲಿ ಈಗತಾನೇ ತೊಡಗಿರುವವರಿಗೆ ಇದು ಅತ್ಯಂತ ಉಪಯುಕ್ತವಾಗಿದೆ. ಮೂಲಗ್ರಂಥದಲ್ಲಿ ಹೆಚ್ಚು ವಿವರಣೆಗಳು ಲಭ್ಯವಿಲ್ಲದಾಗ, ಇಲ್ಲಿ ನೀಡಿರುವ ಹೆಚ್ಚಿನ ವಿವರಣೆ, ಉದ್ಧರಣೆ, ಪಾರಿಭಾಷಿಕ ಪದ, ಇತರ ದರ್ಶನಗಳ ವಿಚಾರ(ವಿಶೇಷವಾಗಿ ಯೋಗ ದರ್ಶನ) – ಇವು ಹೆಚ್ಚು ಅನುಕೂಲಕರವೂ ಉಪಯುಕ್ತವೂ ಆಗಿವೆ.

ಸಾಮಾನ್ಯ ಓದುಗರೂ ಕೂಡ ಶಾಸ್ತ್ರವಿಚಾರಗಳನ್ನು ಹಾಗೂ ವೇದಾಂತದ ತಿರುಳನ್ನು ಸುಲಲಿತವಾಗಿ ಹಾಗೂ ಸುಸ್ಪಷ್ಟವಾಗಿ ಅರಿತುಕೊಂಡು, ವೇದಾಂತದ ಗಹನ ತತ್ತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಸಾಧ್ಯವಾಗಬೇಕೆಂಬ ಉದಾತ್ತ ಆಶಯ ಅನುವಾದಕರ ಈ ಪರಿಶ್ರಮದ ಹಿಂದಿರುವುದು ಕಂಡುಬರುತ್ತದೆ. ಈ ಗ್ರಂಥದಲ್ಲಿ ಮೂಲ ಸಂಸ್ಕೃತದೊಂದಿಗೆ ಕನ್ನಡ ಅನುವಾದ, ವಿವರಣೆಗಳು, ಅಂತೆಯೇ ನಿಖರವಾದ, ಪ್ರೌಢವಾದ ಹಾಗೂ ಉಪಯುಕ್ತವಾದ ಮಾಹಿತಿಗಳಿದ್ದು, ಈ ಕೃತಿ ಹೆಚ್ಚು ಜನಪ್ರಿಯವಾಗಲಿ ಎಂದು ಆಶಿಸುತ್ತೇವೆ. ◆

ಹೊರಗಿನ ಯುದ್ಧಗಳಿಂದ ಏನು ಲಾಭ? ನಿನ್ನೊಳಗೆ ನೀನು ಯುದ್ಧವನ್ನು ಮಾಡು. ತನ್ನನ್ನು ತಾನು ಗೆದ್ದರೆ ಮಾತ್ರ ನಿಜವಾದ ಸುಖ ಪ್ರಾಪ್ತವಾಗುತ್ತದೆ.

ಹೇಗೆ ನಿನಗೆ ದುಃಖವು ಪ್ರಿಯವಲ್ಲವೊ, ಹಾಗೆಯೇ ಎಲ್ಲ ಜೀವಿಗಳಿಗೂ ದುಃಖವು ಪ್ರಿಯವಲ್ಲ – ಹೀಗೆಂದು ತಿಳಿದು ಮತ್ತು ಎಚ್ಚರಿಕೆಯಿಂದ ಎಲ್ಲರನ್ನೂ ತನ್ನಂತೆ ನೋಡುತ್ತ ಎಲ್ಲರ ಮೇಲೂ ದಯೆ ತೋರಿಸು.

ಸಾಧುವಾದವನು ಮಮತ್ವರಹಿತನೂ, ನಿರಹಂಕಾರಿಯೂ, ನಿಸ್ಸಂಗನೂ, ಗೌರವವನ್ನು ತ್ಯಜಿಸಿದವನೂ, ಸ್ಥಾವರ ಹಾಗೂ ಜಂಗಮ ಜೀವಿಗಳೆಲ್ಲದರಲ್ಲಿಯೂ ಸಮಭಾವವನ್ನಿಟ್ಟುಕೊಂಡವನೂ ಆಗಿರುತ್ತಾನೆ.

**– ಭಗವಾನ್ ಮಹಾವೀರ**

## ಬೃಂದಾವನದ ಹೃದಯರೂಪ

# ರೂಪ ಗೋಸ್ವಾಮಿ

ಸ್ವಾಮಿ ವೀರೇಶಾನಂದ



**ರೂ**ಪ ಗೋಸ್ವಾಮಿಗಳು ಚೈತನ್ಯ ಮಹಾಪ್ರಭುವಿನ ಶಿಷ್ಯರಲ್ಲಿ ಅಗ್ರಗಣ್ಯರು. ಗೌಡೀಯ ವೈಷ್ಣವ ಸಂಪ್ರದಾಯಕ್ಕೆ ತಾತ್ತ್ವಿಕ ತಳಹದಿಯನ್ನು ಹಾಕಿಕೊಟ್ಟ ದೊಡ್ಡ ವಿದ್ವಾಂಸರು. ಬೃಂದಾವನದಲ್ಲಿ ಶ್ರೀಕೃಷ್ಣಲೀಲಾಸ್ಥಾನಗಳನ್ನು ಕಂಡುಹಿಡಿದು, ಜೀರ್ಣೋದ್ಧಾರ ಮಾಡಿದ ಮಹಾತ್ಮರು.

ರೂಪ ಗೋಸ್ವಾಮಿಗಳ ಸ್ವಂತ ಊರು ಇಂದು ಬಾಂಗ್ಲಾದೇಶದಲ್ಲಿ ಇರುವ ಜೆಸ್ಸೂರು. ಇವರ ವಂಶಸ್ಥರು ಭಾರದ್ವಾಜ ಗೋತ್ರದವರು. ಇವರು ಮೂಲತಃ ತೆಲುಗು ಬ್ರಾಹ್ಮಣರು ಎಂದೂ ಕೆಲವರು ಹೇಳುತ್ತಾರೆ. ಕೆಲವು ಐತಿಹ್ಯಗಳ ಪ್ರಕಾರ ಅವರ ಮೂಲ ನಮ್ಮ ಕರ್ನಾಟಕ ರಾಜ್ಯ. ಕುಮಾರದೇವ ಅವರ ತಂದೆ. ಕುಮಾರದೇವನಿಗೆ ಮೂರು ಗಂಡು ಮಕ್ಕಳು. ಮೂರು ಜನರೂ ಚೈತನ್ಯ ಮಹಾಪ್ರಭುವಿನ ಶಿಷ್ಯರಾದರು. ಮೂವರೂ ಗೋಸ್ವಾಮಿಗಳು ಎಂದು ಹೆಸರಾದರು. ಅವರೆಂದರೆ, ರೂಪ, ಸನಾತನ, ಅನುಪಮ ಅಥವಾ ವಲ್ಲಭ. ಅವರ ಬಾಲ್ಯದ ಹೆಸರುಗಳು ಅಧಿಕೃತವಾಗಿ ತಿಳಿದುಬಂದಿಲ್ಲ. ಕೆಲವರು ರೂಪ ಗೋಸ್ವಾಮಿಯ ಹೆಸರು ಸಂತೋಷ ಭಟ್ಟ ಎಂದೂ, ಸನಾತನ ಗೋಸ್ವಾಮಿಯ ಹೆಸರು ಅಮರ ಭಟ್ಟ ಎಂದೂ ಹೇಳುತ್ತಾರೆ. ತಮ್ಮ ತಂದೆಯ ಮರಣದ ನಂತರ ಮಕ್ಕಳೆಲ್ಲರೂ ಗೌಡದೇಶದ (ಇಂದಿನ ಬಂಗಾಳ) ರಾಜಧಾನಿಯಾದ ಸಕುರ್ಮ ನಗರಕ್ಕೆ ಹೋಗುತ್ತಾರೆ. ಅಲ್ಲಿ ತಮ್ಮ ಅಧ್ಯಯನವನ್ನು ಮುಂದುವರೆಸುತ್ತಾರೆ. ಬಂಗಾಳ ದೇಶ ನ್ಯಾಯಶಾಸ್ತ್ರದ ಅಧ್ಯಯನಕ್ಕೆ ಪ್ರಸಿದ್ಧವಾಗಿದೆ. ಈ ಮೂರೂ ಜನ ಸಹೋದರರು ನ್ಯಾಯಶಾಸ್ತ್ರದಲ್ಲಿ ಪ್ರವೀಣರಾದರು. ಅಂದಿನ ಕಾಲದ ಪ್ರಸಿದ್ಧ ನ್ಯಾಯಪಂಡಿತನಾದ ಸಾರ್ವಭೌಮ ಭಟ್ಟಾಚಾರ್ಯನೇ ಇವರ ಗುರುಗಳು. ಇದಲ್ಲದೆ ಸಂಸ್ಕೃತ ವ್ಯಾಕರಣ, ಸಾಹಿತ್ಯಗಳಲ್ಲಿಯೂ, ಹಾಗೆಯೇ ಆ ರಾಜ್ಯದ ರಾಜಭಾಷೆಗಳಾದ ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳಲ್ಲಿಯೂ ಈ ಮೂರು ಸಹೋದರರು ಉದ್ದಾಮ ಪಂಡಿತರಾದರು.

ರೂಪ ಮತ್ತು ಸನಾತನ – ಇಬ್ಬರೂ ಉದಾತ್ತ ಗುಣವುಳ್ಳವರಾಗಿದ್ದರು; ಶಾಸ್ತ್ರಜ್ಞರಾಗಿದ್ದರು. ಈ ಗುಣಗಳನ್ನು ಕಂಡು ಬಂಗಾಳದ ಸುಲ್ತಾನನಾದ ಅಲಾದ್ದೀನ್ ಹಸನ್ ಶಾ ಬಹಳವೇ ಮೆಚ್ಚಿ

ಕೊಂಡನು. ತನ್ನ ಆಡಳಿತದಲ್ಲಿ ಅಧಿಕಾರಿಗಳನ್ನಾಗಿ ಅವರನ್ನು ನೇಮಿಸಿದನು. ಇದರಿಂದ ಸಂಪ್ರದಾಯಸ್ಥ ಬ್ರಾಹ್ಮಣರು ಕುಪಿತರಾದರು. ಇವರಿಬ್ಬರನ್ನೂ ಜಾತಿಯಿಂದ ಬಹಿಷ್ಕರಿಸಿದರು. ರೂಪ ಗೋಸ್ವಾಮಿಯು ಸುಲ್ತಾನನ ಪ್ರಧಾನ ಕಾರ್ಯದರ್ಶಿಯಾದರು. ಸನಾತನ ಗೋಸ್ವಾಮಿಯು ಸುಲ್ತಾನನ ಕಂದಾಯ ಇಲಾಖೆಯ ಮುಖ್ಯಸ್ಥನಾದರು. ಇಬ್ಬರೂ ಸುಲ್ತಾನನ ಆಡಳಿತ ನಡೆಸುತ್ತಿದ್ದ ರಾಮಕೇಲಿ ಅಥವಾ ರಹಾನ್‌ಪುರ ನಗರದಲ್ಲಿ ನೆಲೆಸಲಾರಂಭಿಸಿದರು.

ಈ ನಗರದಲ್ಲಿಯೇ ಇವರಿಬ್ಬರೂ ಪ್ರಥಮಬಾರಿಗೆ ಶ್ರೀಚೈತನ್ಯ ಮಹಾಪ್ರಭುವನ್ನು ೧೫೧೪ರಲ್ಲಿ ಸಂದರ್ಶಿಸಿದರು. ಈ ಸಂದರ್ಭದಲ್ಲಿ ಚೈತನ್ಯ ಮಹಾಪ್ರಭುವು ರೂಪ ಗೋಸ್ವಾಮಿ ಮತ್ತು ಸನಾತನ ಗೋಸ್ವಾಮಿ – ಇಬ್ಬರಿಗೂ ಹೀಗೆ ಹೇಳಿದರು: ''ನೀವಿಬ್ಬರೂ ನಿಮ್ಮ ನಿಮ್ಮ ಮನೆಗಳನ್ನು ತೊರೆಯಿರಿ. ನನ್ನನ್ನೇ ಅನುಸರಿಸಿರಿ.'' ಮಹಾಪ್ರಭುವಿನ ದರ್ಶನದಿಂದ ಅವರ ಬದುಕಿನ ದಿಶೆಯೇ ಪರಿವರ್ತನೆಯಾಯಿತು. ಇಬ್ಬರೂ ಮಹಾಪ್ರಭುವಿನ ಅಣತಿಯನ್ನು ಅಕ್ಷರಶಃ ಪಾಲಿಸಲು ಸನ್ನದ್ಧರಾದರು. ಸುಲ್ತಾನನ ಸೇವೆಯನ್ನು ತ್ಯಜಿಸಲು ನಿಶ್ಚಯಿಸಿದರು. ತ್ಯಾಗ ಜೀವನವನ್ನು ಅಪ್ಪಿಕೊಳ್ಳಲು ನಿರ್ಧರಿಸಿದರು. ಚೈತನ್ಯ ಮತ್ತು ಆತನ ಸಂಗಡಿಗರ ಸಂಗದಲ್ಲಿ ಇಡೀ ಬಾಳುವೆಯನ್ನು ಸವೆಸಲು ಮನಸ್ಸು ಮಾಡಿದರು. ರೂಪ ಗೋಸ್ವಾಮಿಯು ತನ್ನೆಲ್ಲ ಸಂಪತ್ತನ್ನೂ, ಧನಕನಕಗಳನ್ನೂ ಎರಡು ದೋಣಿಗಳಲ್ಲಿ ಪೇರಿಸಿದರು. ತನ್ನ ಸ್ವಂತ ಊರಾದ ಜೆಸ್ಸೂರಿಗೆ ಹೋಗಿ ಅವೆಲ್ಲವನ್ನೂ ಬಡವರಿಗೆ ಹಂಚಿಬಿಟ್ಟರು.

ಇದೇ ಸಮಯದಲ್ಲಿ ಹತ್ತಿರದ ಪ್ರದೇಶವಾದ ಸಿಲ್ಹೆಟ್‌ನಲ್ಲಿ ಶ್ರೀಚೈತನ್ಯ ಮಹಾಪ್ರಭುವು ಸಂಚಾರ ಮಾಡುತ್ತಿರುವರೆಂಬ ಸುದ್ದಿ ಬಂದಿತು. ಮಹಾಪ್ರಭುವಿನ ಯಾತ್ರೆಯ ವಿವರಗಳನ್ನು ತಿಳಿದುಕೊಳ್ಳಲು ರೂಪ ಗೋಸ್ವಾಮಿಯು ತಮ್ಮ ದೂತರನ್ನು ಅಲ್ಲಿಗೆ ಕಳುಹಿಸಿದರು. ಮಹಾಪ್ರಭುವು ಈಗಾಗಲೇ ಬಾರೀಘರಿಯಾ ಎಂಬ ಊರಿನ ಕಡೆ ಹೊರಟುಬಿಟ್ಟಿದ್ದಾರೆ ಎಂಬ ವರ್ತಮಾನವನ್ನು ದೂತರು ತಂದರು. ರೂಪ ಗೋಸ್ವಾಮಿ ಮತ್ತು ಆತನ ಚಿಕ್ಕ ತಮ್ಮ ಅನುಪಮ ಗೋಸ್ವಾಮಿ – ಇಬ್ಬರೂ ಮಹಾಪ್ರಭುವನ್ನು ಭೇಟಿಯಾಗಲು ಹೊರಟುಬಿಟ್ಟರು. ಇವರಿಬ್ಬರು ಮಾತ್ರವೇ ಬಾರೀಘರಿಯಾ ಊರಿನಲ್ಲಿ ಮಹಾಪ್ರಭುವಿನ ದರ್ಶನವನ್ನು ಪಡೆದುಕೊಂಡರು. ಸನಾತನ ಗೋಸ್ವಾಮಿಗೆ ಒಂದು ಪತ್ರವನ್ನು ಬರೆದು ನಬಗಂಜಿನಲ್ಲಿ ತಮ್ಮನ್ನು ಕಾಣುವಂತೆ ಕೇಳಿಕೊಂಡರು. ನಿನಗಾಗಿ ೧೦,೦೦೦ ಚಿನ್ನದ ನಾಣ್ಯಗಳನ್ನು ಮೀಸಲಾಗಿ ಇಟ್ಟಿದ್ದೇವೆ ಎಂದೂ ಬರೆದರು. ಇಷ್ಟರಲ್ಲಿ ಅವಿಧೇಯತೆಯ ಆರೋಪವನ್ನು ಹೊರಿಸಿ ಸುಲ್ತಾನನು ಸನಾತನರನ್ನು ಬಂಧಿಸಿ ಸೆರೆಯಲ್ಲಿಟ್ಟನು. ಸನಾತನರು ಆ ಚಿನ್ನದ ನಾಣ್ಯಗಳನ್ನು ಕಾರಾಗೃಹದ ಅಧಿಕಾರಿಗಳಿಗೆ ಕೊಟ್ಟು ಬಂಧನದಿಂದ ಮುಕ್ತರಾದರು. ಚೈತನ್ಯ ಮಹಾಪ್ರಭುವನ್ನು ಕಾಣಲು ವಾರಾಣಸಿಗೆ ತೆರಳಿದರು.

ಇಷ್ಟರಲ್ಲಿ ಮಹಾಪ್ರಭುವು ಬೃಂದಾವನದ ದರ್ಶನವನ್ನು ಮಾಡಿಕೊಂಡು, ಪ್ರಯಾಗ ಕ್ಷೇತ್ರವನ್ನು ನೋಡಿಕೊಂಡು, ವಾರಾಣಸಿಯಲ್ಲಿ ನೆಲೆಸಿದ್ದರು. ಇಲ್ಲಿಯೇ ರೂಪ ಗೋಸ್ವಾಮಿಯು ಅವರನ್ನು ಎರಡನೆಯ ಸಲ ದರ್ಶನ ಮಾಡಿದರು. ಅಲ್ಲಿನ ದಶಾಶ್ವಮೇಧ ಘಾಟಿನಲ್ಲಿ ಮಹಾಪ್ರಭುವು ರೂಪ ಗೋಸ್ವಾಮಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟರು. ಗೌಡೀಯ ವೈಷ್ಣವ ತತ್ತ್ವದ ರಹಸ್ಯವನ್ನು ಉಪದೇಶಿಸಿದರು. ಇದೇ ಸಂದರ್ಭದಲ್ಲಿ ಮಹಾಪ್ರಭುವು ರೂಪ ಗೋಸ್ವಾಮಿಗೆ ಎರಡು ಕಾರ್ಯಗಳನ್ನು ನಿರ್ವಹಿಸುವಂತೆ ನಿರ್ದಿಷ್ಟವಾದ ಉಪದೇಶವನ್ನು ಮಾಡಿದರು: ೧. ಬೃಂದಾವನದಲ್ಲಿಯೇ ನೆಲೆಸಿ, ಅಲ್ಲಿನ ಪುಣ್ಯಸ್ಥಳಗಳನ್ನು ಜೀರ್ಣೋದ್ಧಾರ ಮಾಡುವುದು. ೨. ಗೌಡೀಯ ವೈಷ್ಣವ ತತ್ತ್ವ ಶಾಸ್ತ್ರದ ಬಗ್ಗೆ ಗ್ರಂಥಗಳನ್ನು ರಚಿಸಿ, ಗೌಡೀಯ ವೈಷ್ಣವ ಮತವನ್ನು ಪ್ರಚಾರ ಮಾಡುವುದು. ಮಹಾಪ್ರಭುವಿನ ಈ ಎರಡು ಆಣತಿಗಳನ್ನು ತಮ್ಮ ಜೀವನದುದ್ದಕ್ಕೂ ರೂಪ ಗೋಸ್ವಾಮಿಯು ಶಿರಸಾವಹಿಸಿ ನಡೆಸಿದರು. ತಮ್ಮ ಜೀವನವನ್ನು ಅವಕ್ಕಾಗಿಯೇ ಸವೆಸಿದರು. ತದನಂತರ ಮಹಾಪ್ರಭುವು ರೂಪ ಗೋಸ್ವಾಮಿಗಳನ್ನು ಬೃಂದಾವನಕ್ಕೆ ಕಳಿಸಿದರು.

ಇನ್ನೊಂದು ಐತಿಹ್ಯದ ಪ್ರಕಾರ ಮಹಾಪ್ರಭುವು ಪ್ರಯಾಗದಲ್ಲಿಯೇ ರೂಪ ಗೋಸ್ವಾಮಿಗೆ ಉಪದೇಶ ಮಾಡುತ್ತಾರೆ. ಹಾಗೆ ಉಪದೇಶ ಮಾಡುವಾಗ ಹೀಗೆ ಹೇಳುತ್ತಾರೆ: ''ಭಕ್ತಿ ರಸಸಾಗರವು ಗಭೀರವಾದುದು. ಅದರ ಆಳ ಉದ್ದಗಲಗಳನ್ನು ಯಾರೂ ಅಳೆಯಲಾರರು. ಇದನ್ನು ನೀನು ಸೇವಿಸಲು ಅನುಕೂಲವಾಗಲೆಂದು, ಅದರ ಒಂದು ಹನಿಯಷ್ಟನ್ನೇ ನಿನಗೆ ಉಪದೇಶಿಸುತ್ತೇನೆ.'' ಭಕ್ತಿ ರಸಸಿಂಧುವಿನ ಆ ಒಂದು ಬಿಂದುವೇ ಲಕ್ಷ ಲಕ್ಷ ಜನರನ್ನು ಉದ್ಧರಿಸಲು ಸಾಕು ಎಂದು ಚೈತನ್ಯ ಚರಿತಾಮೃತ ಬಣ್ಣಿಸುತ್ತದೆ.

ಅಂದಿನಿಂದ ರೂಪ ಗೋಸ್ವಾಮಿಯು ಬೃಂದಾವನದಲ್ಲಿಯೇ ನಿವಾಸ ಹೂಡಿದರು. ಅವರ ತಮ್ಮನಾದ ಸನಾತನ ಗೋಸ್ವಾಮಿ ಕೂಡಾ ಬೃಂದಾವನದಲ್ಲಿಯೇ ಇರಲಾರಂಭಿಸಿದರು. ಶ್ರೀಕೃಷ್ಣ ಲೀಲೆಯ ಹಲವಾರು ಮಹತ್ವದ ಸ್ಥಳಗಳನ್ನು ಅವರು ಕಂಡುಹಿಡಿದರು. ಅದರಲ್ಲೂ ಪ್ರಸಿದ್ಧವಾದ ಗೋವಿಂದದೇವ ವಿಗ್ರಹವನ್ನು ಉದ್ಧರಿಸಿದ್ದು ರೂಪ ಗೋಸ್ವಾಮಿಯ ಸಾಧನೆಗಳಲ್ಲಿ ಮಿಗಿಲಾದುದು. ಶ್ರೀಕೃಷ್ಣನ ಮರಿಮಗನಾದ ವಜ್ರನಾಭನು ಈ ವಿಗ್ರಹವನ್ನು ಸ್ಥಾಪಿಸಿ ಪೂಜಿಸುತ್ತಿದ್ದನು ಎಂದು ಬೃಂದಾವನದ ಬಗೆಗಿನ ಐತಿಹ್ಯ ಹೇಳುತ್ತದೆ. ಈ ಗೋವಿಂದ ದೇವನ ವಿಗ್ರಹವು ಅತಿ ಸುಂದರವಾಗಿದೆ. ಈಗ ಇದರ ಮೂಲ ವಿಗ್ರಹವು ಜೈಪುರದ ಮಂದಿರದಲ್ಲಿ ಪೂಜೆಗೊಳ್ಳುತ್ತಿದೆ. ದಿನನಿತ್ಯ ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿದೆ. ಈ ವಿಗ್ರಹದ ಸೌಂದರ್ಯವನ್ನು ಕುರಿತು

ಶ್ರೀನಿವಾಸ ಆಚಾರ್ಯ ಎಂಬ ಸಾಧಕರು ತಮ್ಮ ಒಂದು ಕವನದಲ್ಲಿ ಹೀಗೆ ವಿವರಿಸುತ್ತಾರೆ: ಶ್ರೀಗೋವಿಂದನ ಅಪ್ರತಿಮ ಸೌಂದರ್ಯವನ್ನು ಕಂಡು ಶ್ರೀರಾಧಿಕಾ ರಾಣಿ ತನ್ನ ಸಖಿಯರಿಗೆ ಹೀಗೆ ಹೇಳುತ್ತಾಳೆ: ''ಚಂದ್ರನಂತಿರುವ ಇವನ ಮುಖವನ್ನು ರಚಿಸಿದ ಶಿಲ್ಪಿಯಾದರೂ ಯಾರು? ಎರಡು ಕಮಲದಂತಹ ಈ ಕಣ್ಣುಗಳನ್ನು ಮೂಡಿಸಿದವನು ಅವನಾರು?.... ನನ್ನ ಮನಸ್ಸು ಅವುಗಳ ಮೇಲೆಯೇ ನಿಂತುಬಿಟ್ಟಿದೆ. ''

ಇದಲ್ಲದೆ ರೂಪ ಮತ್ತು ಸನಾತನ – ಇಬ್ಬರೂ ಬೃಂದಾವನದಲ್ಲಿ ನೆಲೆಸಿದ್ದ ಹಲವಾರು ವೈಷ್ಣವ ಸಂತರ ಜೊತೆಗೆ ಮಧುರವಾದ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಅವರಲ್ಲಿ ಪ್ರಮುಖರಾದವರು ಎಂದರೆ ಲೋಕನಾಥ ಗೋಸ್ವಾಮಿ, ಭೂಗರ್ಭ ಗೋಸ್ವಾಮಿ ಮುಂತಾದವರು. ಕೆಲವು ಕಾಲದ ನಂತರ ಅವರ ಸೋದರಳಿಯನಾದ ಜೀವ ಗೋಸ್ವಾಮಿಯೂ ಸೇರಿಕೊಂಡರು. ಅವರಿಗೆ ರೂಪ ಗೋಸ್ವಾಮಿಯೇ ಸ್ವತಃ ವೈಷ್ಣವ ದೀಕ್ಷೆಯನ್ನು ನೀಡಿದರು ಹಾಗೂ ಗೌಡೀಯ ವೈಷ್ಣವ ತತ್ತ್ವಶಾಸ್ತ್ರವನ್ನು ಬೋಧಿಸಿದರು.

ಬೃಂದಾವನದಲ್ಲಿ ರೂಪ ಮತ್ತು ಸನಾತನ ಗೋಸ್ವಾಮಿಗಳು ಆದರ್ಶ ಜೀವನವನ್ನು ನಡೆಸಿದರು. ಭಗವನ್ನಾಮ ಶ್ರವಣ, ಉಚ್ಚಾರಣೆ, ಸ್ಮರಣೆ ಮತ್ತು ಭಜನೆಗಳಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡರು. ಇಲ್ಲಿದ್ದಾಗ ರೂಪ ಗೋಸ್ವಾಮಿಯ ಮನಸ್ಸಿನಲ್ಲಿ ಒಂದು ಆಲೋಚನೆ ಬಂದಿತು: ''ಶ್ರೀಚೈತನ್ಯ ಮಹಾಪ್ರಭುವಿನ ಹೃದಯಾಳದ ಆಸೆಯನ್ನು ತೀರಿಸುವುದಕ್ಕಾಗಿ ನಾನೊಂದು ನಾಟಕವನ್ನು ಬರೆಯುತ್ತೇನೆ. ಈ ನಾಟಕದಲ್ಲಿ ಶ್ರೀಕೃಷ್ಣ ಮತ್ತು ರಾಧೆಯರು ಬೃಂದಾವನದಲ್ಲಿ ಆಡಿದ ಲೀಲೆಗಳನ್ನು ವಿಸ್ತಾರವಾಗಿ ವರ್ಣಿಸುತ್ತೇನೆ. ಹಾಗೆಯೇ ಶ್ರೀಕೃಷ್ಣನು ಮಥುರಾನಗರಕ್ಕೆ ತೆರಳಿದ ಮೇಲೆ ಅವರಿಬ್ಬರ ನಡುವೆ ಉಂಟಾದ ವಿರಹ ಯಾತನೆಯನ್ನೂ ಬಣ್ಣಿಸುತ್ತೇನೆ.''

ಅದೇ ಸಮಯದಲ್ಲಿ ರೂಪ ಗೋಸ್ವಾಮಿಯು ಪುರೀಧಾಮಕ್ಕೆ ತೀರ್ಥಯಾತ್ರೆಗೆ ಹೊರಟರು. ತಾನು ರಚಿಸಬೇಕಾದ ನಾಟಕದ ಬಗ್ಗೆಯೇ ಯೋಚಿಸುತ್ತ ಪ್ರಯಾಣ ಮಾಡುತ್ತಿದ್ದರು. ದಾರಿಯಲ್ಲಿ ಸತ್ಯಭಾಮಾಪುರ ಎಂಬ ಹಳ್ಳಿಯನ್ನು ತಲುಪಿದರು. ಅದು ಶ್ರೀಕೃಷ್ಣನ ರಾಣಿಯರಲ್ಲಿ ಪ್ರಮುಖಳಾದ ಸತ್ಯಭಾಮೆಯು ಹುಟ್ಟಿದ ಸ್ಥಳ. ಅಲ್ಲಿ ರಾತ್ರಿ ವಿಶ್ರಮಿಸಿದ್ದಾಗ, ಕನಸಿನಲ್ಲಿ ಸತ್ಯಭಾಮೆಯೇ ಬಂದು ರೂಪ ಗೋಸ್ವಾಮಿಗಳಿಗೆ ಹೇಳುತ್ತಾಳೆ, ''ದಯವಿಟ್ಟು ನೀನು ಬರೆಯುತ್ತಿರುವ ನಾಟಕವನ್ನು ಎರಡು ಭಾಗಗಳನ್ನಾಗಿ ವಿಭಾಗಿಸು'' ಎಂದು.

ಕಡೆಗೆ ರೂಪ ಗೋಸ್ವಾಮಿಯು ಜಗನ್ನಾಥ ಪುರೀಧಾಮಕ್ಕೆ ಆಗಮಿಸುತ್ತಾರೆ. ಅಲ್ಲಿ ಆ ಸಮಯದಲ್ಲಿ ಶ್ರೀಚೈತನ್ಯ ಮಹಾಪ್ರಭುವೇ ನಿವಾಸ ಹೂಡಿರುತ್ತಾರೆ. ರೂಪ ಗೋಸ್ವಾಮಿಯು ತಾವು ಕಂಡ ಕನಸಿನ ವೃತ್ತಾಂತವನ್ನು ಮಹಾಪ್ರಭುವಿಗೆ ನಿವೇದಿಸುತ್ತಾರೆ. ಇದಕ್ಕೆ ಪುಷ್ಟಿ ಕೊಡುವಂತೆ ಚೈತನ್ಯ ಮಹಾಪ್ರಭುವು ರೂಪ ಗೋಸ್ವಾಮಿಗೆ ಹೀಗೆ ಕೇಳಿಕೊಳ್ಳುತ್ತಾರೆ: ''ಯದುಕುಲದಲ್ಲಿ ಹುಟ್ಟಿದ ಕೃಷ್ಣನೇ ಬೇರೆ, ನಂದವಂಶದ ಕೃಷ್ಣನೇ ಬೇರೆ. ನಂದಕುಲದ ಕೃಷ್ಣನು ಯಾವತ್ತೂ ರಾಧೆಯೊಡನೆ ಲೀಲೆಯನ್ನು ಆಡುತ್ತ ಇರುತ್ತಾನೆ. ಆ ಕೃಷ್ಣನನ್ನು ಬೃಂದಾವನದಿಂದ ಹೊರಕ್ಕೆ ಹೋದನೆಂದು ನಿನ್ನ ನಾಟಕದಲ್ಲಿ ಬಣ್ಣಿಸಬೇಡ.'' ಇದರ ಹಿಂದೆ ಗಹನವಾದ ತತ್ತ್ವವೊಂದಿದೆ ಎಂದು ಗೌಡೀಯ ವೈಷ್ಣವರು ನಂಬುತ್ತಾರೆ. ಕೃಷ್ಣನು ರಾಧೆಯನ್ನು ಬಿಟ್ಟುಹೋಗುವುದನ್ನು ಅವರು ಸಹಿಸುವುದಿಲ್ಲ. ಆ ದುಃಖವನ್ನು ಅವರಿಂದ ತಾಳಿಕೊಳ್ಳಲು ಆಗುವುದಿಲ್ಲ.

ಇದರಿಂದಾಗಿ ರೂಪ ಗೋಸ್ವಾಮಿಯು ತನ್ನ ಕೃತಿಯನ್ನು ಎರಡು ನಾಟಕಗಳಾಗಿ ವಿಭಾಗ ಮಾಡುತ್ತಾರೆ. ಒಂದರಲ್ಲಿ ಕೃಷ್ಣ–ರಾಧೆಯರ ಮಿಲನದ ಆನಂದವನ್ನು ವಿವರಿಸುತ್ತಾರೆ. ಇನ್ನೊಂದರಲ್ಲಿ ಅವರಿಬ್ಬರ ನಡುವಣ ವಿರಹ ಕಾತುರತೆಯನ್ನು ಬಣ್ಣಿಸುತ್ತಾರೆ. ಮಿಲನದ ಪ್ರೀತಿಯು ಉತ್ಕಟವಾಗಿ ಪ್ರದರ್ಶಿತವಾಗುವುದು ವಿರಹದ ಸಂದರ್ಭದಲ್ಲಿಯೇ ಎಂದು ಗೌಡೀಯ ವೈಷ್ಣವ ಸಿದ್ಧಾಂತ ಹೇಳುತ್ತದೆ. ಹೀಗಾಗಿ ವಿರಹದ ದುಃಖವನ್ನೂ ರೂಪ ಗೋಸ್ವಾಮಿ ಚಿತ್ರಿಸುತ್ತಾರೆ. ಮೊದಲ ನಾಟಕಕ್ಕೆ 'ವಿದಗ್ಧ ಮಾಧವ' ಎಂದೂ, ಎರಡನೆಯ ನಾಟಕಕ್ಕೆ 'ಲಲಿತ ಮಾಧವ' ಎಂದೂ ಹೆಸರು ಕೊಡುತ್ತಾರೆ. ಈ ಗ್ರಂಥಗಳ ರಚನೆಯ ಸಮಯದಲ್ಲಿ ಒಂದು ವಿಸ್ಮಯ ನಡೆಯುತ್ತಿತ್ತಂತೆ. ರೂಪ ಗೋಸ್ವಾಮಿಗಳು ಬೃಂದಾವನದಲ್ಲಿ ತಮ್ಮ ಭಜನ ಕುಟೀರದಲ್ಲಿ ಕುಳಿತುಕೊಂಡು ಶ್ರೀಕೃಷ್ಣ – ರಾಧಾರಾಣಿಯರ ಮಿಲನ ಮತ್ತು ವಿರಹವನ್ನು ಕುರಿತು ಬರೆಯುತ್ತಿದ್ದರು. ಪಕ್ಕದಲ್ಲಿಯೇ ಒಂದು ಕದಂಬ ಮರವಿತ್ತು. ಗೋಸ್ವಾಮಿಗಳು ವಿರಹದ ಬಗ್ಗೆ ಬರೆಯುತ್ತಿದ್ದಾಗ, ಆ ಮರದ ಎಲೆಗಳು ಕೆಳಕ್ಕೆ ಬೀಳುತ್ತಿದ್ದವಂತೆ. ಮನೋವೇದನೆಯಿಂದ ಮರವು ಕಣ್ಣೀರಿನ ಹನಿಗಳನ್ನು ಸುರಿಸುತ್ತಿರುವಂತೆ ಇದು ಕಾಣುತ್ತಿತ್ತು. ಗೋಸ್ವಾಮಿಗಳು ಮಿಲನದ ಪರಮಾನಂದವನ್ನು ಬಣ್ಣಿಸಿ ಬರೆಯುತ್ತಿದ್ದಾಗ ಆ ಕದಂಬ ವೃಕ್ಷವು ಸಂತೋಷದಿಂದ ಹೊಸ ಹೊಸ ಎಲೆಗಳನ್ನು ಮತ್ತು ಅರಳುತ್ತಿರುವ ಹೂವುಗಳನ್ನು ಸೃಜಿಸುತ್ತಿತ್ತಂತೆ. ಪರಿಶುದ್ಧ ವೈಷ್ಣವರಾದ ರೂಪ ಗೋಸ್ವಾಮಿಗಳ ಕೃಪೆಯಿಂದ, ಮಾನವನೂ ಅರ್ಥಮಾಡಿಕೊಳ್ಳಲು ಅಸಾಧ್ಯವಾದ ಪವಿತ್ರ ದಿವ್ಯಭಾವನೆಗಳನ್ನು, ಒಂದು ಸಾಧಾರಣ ಕದಂಬ ವೃಕ್ಷವೂ ಅರಿತುಕೊಳ್ಳಲು ಸಾಧ್ಯವಾಯಿತು ಎಂದು ಶ್ರದ್ಧಾಳುಗಳಾದ ಭಕ್ತರು ನಂಬುತ್ತಾರೆ.

ಜಗನ್ನಾಥ ರಥಯಾತ್ರೆಯ ಸಮಯದಲ್ಲಿ ರೂಪ ಗೋಸ್ವಾಮಿಗಳು, ಚೈತನ್ಯ ಮಹಾಪ್ರಭುವನ್ನು ಸ್ತುತಿಸುವ ಒಂದು ಶ್ಲೋಕವನ್ನು ರಚಿಸುತ್ತಾರೆ. ಚೈತನ್ಯ ಮಹಾಪ್ರಭು ಅದನ್ನು ತಮ್ಮ ಆತ್ಮೀಯ ಶಿಷ್ಯರಿಗೆ ಮಾತ್ರವೇ ಓದಿ ಹೇಳುವಂತೆ ಕೇಳಿಕೊಳ್ಳುತ್ತಾರೆ.

ಈ ಶ್ಲೋಕವನ್ನು ಅಲ್ಲಿ ನೆರೆದ ವೈಷ್ಣವರು ಆಲಿಸಿ, ರೂಪ ಗೋಸ್ವಾಮಿಗಳನ್ನು ಬಹಳವಾಗಿ ಪ್ರಶಂಸೆ ಮಾಡುತ್ತಾರೆ. ಆ ಶ್ಲೋಕವು **ನಮೋ ಮಹಾವದನ್ಯಾಯ** ಎಂದು ಆರಂಭವಾಗುತ್ತದೆ. ಅದರ ಅರ್ಥ ಹೀಗಿದೆ: 'ಗೌರಾಂಗನಾದ ಶ್ರೀಕೃಷ್ಣ ಚೈತನ್ಯನಿಗೆ ನಮಸ್ಕಾರಗಳು. ಅವರು ಸಾಕ್ಷಾತ್ ಶ್ರೀಕೃಷ್ಣಸ್ವರೂಪಿಯೇ ಆಗಿದ್ದಾರೆ. ಶ್ರೀಕೃಷ್ಣ ಪ್ರೇಮವನ್ನು ಎಲ್ಲರಿಗೂ ಪ್ರದಾನ ಮಾಡುತ್ತಿ ದ್ದಾರೆ.''

ಮಹಾಪ್ರಭುವಿನ ಹೃದಯದ ಭಾವನೆಗಳನ್ನು ಅರ್ಥಮಾಡಿಕೊಂಡವರು ಬಹಳ ವಿರಳ. ಅವರಲ್ಲಿ ರೂಪ ಗೋಸ್ವಾಮಿಗಳು ಅಗ್ರಗಣ್ಯರು ಎಂದು ಹೇಳಬಹುದು. ಜಗನ್ನಾಥ ರಥಯಾತ್ರೆಯ ಸಮಯದಲ್ಲಿ, ರಥದ ಮುಂದೆ ನರ್ತನ ಮಾಡುತ್ತ 'ಸಾಹಿತ್ಯ ದರ್ಪಣ' ಎನ್ನುವ ಲೌಕಿಕ ಗ್ರಂಥದ ಒಂದು ಪದ್ಯವನ್ನು ಮಹಾಪ್ರಭುವು ಹೇಳಿಕೊಳ್ಳುತ್ತಿರುತ್ತಾರೆ. ಅದರಲ್ಲಿ ಒಬ್ಬನ ಪತ್ನಿಯು ತನ್ನ ಭಾವನೆಗಳನ್ನು ಹೀಗೆ ತೋಡಿಕೊಳ್ಳುತ್ತಾಳೆ: ''ಯೌವನದಲ್ಲಿ ನನ್ನ ಹೃದಯವನ್ನು ಗೆದ್ದ ಪ್ರಿಯನೇ ಈಗ ನನ್ನ ಪತಿಯಾಗಿದ್ದಾನೆ. ಆದರೆ ನಾನು ಕಳೆದ ಯೌವನದ ದಿನಗಳನ್ನೇ ನೆನಪಿಸಿಕೊಂಡು ಸಂತೋಷಪಡುತ್ತೇನೆ'' ಎಂದು.

ಈ ಲೌಕಿಕ ಪ್ರೀತಿಯ ಪದ್ಯವನ್ನು ಚೈತನ್ಯ ಮಹಾಪ್ರಭುಗಳು ಏಕೆ ತಾನೇ ಹಾಡಿಕೊಂಡರು ಎಂದು ಯಾರಿಗೂ ಅರಿವಾಗಲಿಲ್ಲ; ಅವರ ಹೃದಯದ ಭಾವನೆಯನ್ನು ತಿಳಿದುಕೊಳ್ಳಲು ಎಲ್ಲರೂ ಅಸಮರ್ಥರಾದರು. ಆದರೆ ರೂಪ ಗೋಸ್ವಾಮಿ ಮಾತ್ರವೇ ಒಡನೆ ಇನ್ನೊಂದು ಪದ್ಯವನ್ನು ರಚಿಸಿ, ಚೈತನ್ಯ ಮಹಾಪ್ರಭುಗಳ ನಿಜವಾದ ಭಾವಕ್ಕೆ ಸರಿಯಾದ ಅಭಿವ್ಯಕ್ತಿಯನ್ನು ನೀಡುತ್ತಾರೆ. ಅದರ ಭಾವಾರ್ಥ ಹೀಗಿದೆ: ರಾಧೆಯು ತನ್ನ ಒಬ್ಬಳು ಸಖಿಗೆ ಹೇಳಿಕೊಳ್ಳುತ್ತಿದ್ದಾಳೆ, ''ನನ್ನ ಪ್ರಿಯ ಸಖಿ, ನಾನು ಈಗ ವಯಸ್ಕನಾದ ನನ್ನ ಪ್ರಿಯಮಿತ್ರ ಕೃಷ್ಣನನ್ನು ಕುರುಕ್ಷೇತ್ರದಲ್ಲಿ ಭೇಟಿಯಾದೆನು. ನಾನು ಅದೇ ರಾಧಾರಾಣಿ. ಅವನೂ ಕೂಡ ಅದೇ ಶ್ರೀಕೃಷ್ಣ. ನಾವೀಗ ಮತ್ತೆ ಸೇರಿದ್ದೇವೆ. ಇದೊಂದು ಮಧುರವಾದ ಅನುಭವವೇ ಸರಿ. ಆದರೆ ನಾನು ಮತ್ತೆ ಯಮುನಾ ನದಿಯ ದಡಕ್ಕೆ ಹೋಗಲು ಇಚ್ಛಿಸುತ್ತೇನೆ. ಅಲ್ಲಿನ ಕಾಡಿನ ಮರಗಳ ನೆರಳಿನಲ್ಲಿ ಮತ್ತೆ ಶ್ರೀಕೃಷ್ಣನನ್ನು ಸೇರಲು ಹಾತೊರೆಯುತ್ತೇನೆ. ಬೃಂದಾವನದ ಅರಣ್ಯದ ಆ ನಿಶ್ಶಬ್ದ ಪರಿಸರದಲ್ಲಿ ಕೇಳಿಬರುತ್ತಿರುವ ಮಾಧವನ ಮುರಳೀ ನಿನಾದವನ್ನು ಮತ್ತೆ ಆಲಿಸಲು ಹಾತೊರೆಯುತ್ತೇನೆ.''

ಹೀಗೆ ಗೌಡೀಯ ವೈಷ್ಣವ ಸಂಪ್ರದಾಯದಲ್ಲಿ, ಶ್ರೀಚೈತನ್ಯ ಮಹಾಪ್ರಭುವಿನ 'ಮನೋಭೀಷ್ಟ' ಅಥವಾ ಮನದಾಳದ ಆಸೆಯನ್ನು ಪೂರೈಸಿದ ಶ್ರೇಷ್ಠ ಆಚಾರ್ಯರೆಂದು ರೂಪ ಗೋಸ್ವಾಮಿಗಳು ಪ್ರಸಿದ್ಧರಾಗಿದ್ದರು. ತಮ್ಮ ಕೃತಿಗಳ ಮೂಲಕ ಮಹಾಪ್ರಭುವಿನ ವೈಷ್ಣವ ಸಿದ್ಧಾಂತವನ್ನು ವಿವರಿಸಿದ್ದಲ್ಲದೆ, ಬೃಂದಾವನವನ್ನು ಪುನರುದ್ಧಾರ ಮಾಡುವ ಮಹಾಪ್ರಭುವಿನ ಮಹದಿಚ್ಛೆಯನ್ನೂ ಅವರು ಪೂರೈಸಿದರು. ರಾಧಾ-ಕೃಷ್ಣರ ಸೇವೆಯನ್ನು ಎಂದೆಂದಿಗೂ ಮಾಡುವ ರೂಪಮಂಜರಿ ಎಂಬ ಗೋಪಿಕಾ ಸ್ತ್ರೀಯ ಅವತಾರವೇ ರೂಪ ಗೋಸ್ವಾಮಿಗಳು ಎಂದು ಗೌಡೀಯ ವೈಷ್ಣವರು ನಂಬುತ್ತಾರೆ.

ರೂಪ ಗೋಸ್ವಾಮಿಗಳು ಸಂಸ್ಕೃತ ಸಾಹಿತ್ಯದಲ್ಲಿ ವಿಶಾರದರು. ತತ್ತ್ವಶಾಸ್ತ್ರ, ಕಾವ್ಯಮೀಮಾಂಸೆ, ನಾಟಕ ಮತ್ತು ನಾಟಕ ಶಾಸ್ತ್ರ - ಹೀಗೆ ಹಲವಾರು ಪ್ರಕಾರಗಳಲ್ಲಿ ಅವರು ತಮ್ಮ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ:

೧. ಭಕ್ತಿರಸಾಮೃತಸಿಂಧು : ಇದು ಗೌಡೀಯ ವೈಷ್ಣವ ಸಿದ್ಧಾಂತದ ಪ್ರಮುಖ ಗ್ರಂಥಗಳಲ್ಲಿ ಒಂದು. ಭಕ್ತಿಯ ಹಲವಾರು ಹಂತಗಳನ್ನು ಇದು ವಿಶದವಾಗಿ ಬಣ್ಣಿಸುತ್ತದೆ. ಮೊದಲ ಹೆಜ್ಜೆಯಾದ 'ಶ್ರದ್ಧೆ' ಯಿಂದ ಹಿಡಿದು, ಅತ್ಯುನ್ನತ ಹಂತವಾದ 'ಮಹಾಭಾವ'ದವರೆಗೆ ಎಲ್ಲ ರೀತಿಯ ಭಾವಗಳ ವಿಕಾಸವನ್ನು ಗೋಸ್ವಾಮಿಗಳು ಈ ಗ್ರಂಥದಲ್ಲಿ ವಿವರಿಸುತ್ತಾರೆ.

೨. ಉಜ್ವಲ ನೀಲಮಣಿ : ಈ ಗ್ರಂಥದಲ್ಲಿ ಮಾಧುರ್ಯ ರಸವನ್ನು ವಿಶೇಷವಾಗಿ ಬಣ್ಣಿಸಲಾಗಿದೆ. ಈ ಪುಸ್ತಕ 'ಭಕ್ತಿರಸಾಮೃತಸಿಂಧು' ಪುಸ್ತಕಕ್ಕೆ ಪೂರಕ ಗ್ರಂಥದಂತೆ ಇದೆ.

೩. ಲಘು ಭಾಗವತಾಮೃತ : ಸನಾತನ ಗೋಸ್ವಾಮಿಗಳು 'ಬೃಹತ್ ಭಾಗವತಾಮೃತ' ಎಂಬ ಮೇರು ಗ್ರಂಥವನ್ನು ರಚಿಸಿದ್ದಾರೆ. ರೂಪ ಗೋಸ್ವಾಮಿಗಳು ಇದನ್ನು ಈ ಗ್ರಂಥದಲ್ಲಿ ಸಂಗ್ರಹಿಸಿದ್ದಾರೆ. ಈ ಪುಸ್ತಕದಲ್ಲಿ ಶ್ರೀಕೃಷ್ಣನ ಆಂತರಿಕ ಸ್ವರೂಪ ಮತ್ತು ಅವನ ಅವತಾರಗಳನ್ನು ವರ್ಣಿಸಲಾಗಿದೆ. ಹಾಗೆಯೇ ಕೃಷ್ಣ ಭಕ್ತರ ಚರಿತೆಗಳನ್ನೂ ಬಣ್ಣಿಸಲಾಗಿದೆ.

೪. ವಿದಗ್ಧ ಮಾಧವ ಮತ್ತು ಲಲಿತ ಮಾಧವ : ಈ ಎರಡು ಗ್ರಂಥಗಳ ಮಹತ್ವವನ್ನು ಈಗಾಗಲೇ ನೋಡಿದ್ದೇವೆ. ಮೊದಲ ಗ್ರಂಥವು ೧೫೨೪ರಲ್ಲಿ ಮತ್ತು ಎರಡನೆಯ ಗ್ರಂಥವು ೧೫೩೭ರಲ್ಲಿ ಸಂಪೂರ್ಣವಾಯಿತು.

೫. ಸ್ತವಮಾಲ : ರೂಪ ಗೋಸ್ವಾಮಿಗಳು ರಚಿಸಿದ ಅನೇಕ ಪ್ರಾರ್ಥನಾ ಶ್ಲೋಕಗಳ ಸಂಗ್ರಹ ಇದು.

೬. ದಾನ ಕೇಲಿ ಕೌಮುದಿ : ಇದೊಂದ ಏಕಾಂಕ ನಾಟಕ. ಕೃಷ್ಣ ಮತ್ತು ಗೋಪಿಯರ ನಡುವೆ ನಡೆದ ದಾನಕೇಲಿಯ (ತೆರಿಗೆ ಸಂಗ್ರಹಿಸುವ ಆಟ) ವರ್ಣನೆಯನ್ನು ನಾವು ಇದರಲ್ಲಿ ನೋಡಬಹುದು.

ಅಲ್ಲದೆ ಇನ್ನೂ ಹಲವಾರು ಗ್ರಂಥಗಳನ್ನು ರೂಪ ಗೋಸ್ವಾಮಿಗಳು ರಚಿಸಿದ್ದಾರೆ.

ರೂಪ ಗೋಸ್ವಾಮಿಗಳು ಕ್ರಿ.ಶ. ೧೫೬೪ ನೇ ಇಸವಿಯಲ್ಲಿ ಬೃಂದಾವನದಲ್ಲಿಯೇ ದೇಹತ್ಯಾಗ ಮಾಡಿದರು. ಅವರ ಸಮಾಧಿ ಪೀಠವು ಬೃಂದಾವನದ ರಾಧಾ-ದಾಮೋದರ ಮಂದಿರದ ಪರಿಸರದಲ್ಲಿ ಇದೆ. ◆

# ದೇಗುಲ ನಿರ್ಮಾಣದ ಲೆಕ್ಕಪರಿಶೋಧನೆ

**ಕಥೆ:** ಯು.ವಿ. ಸ್ವಾಮಿನಾಥ ಅಯ್ಯರ್ **ಚಿತ್ರ:** ವಿ. ಆರ್ಮುಗಂ **ನಿರೂಪಣೆ:** ರೇವತಿ

1




2




3 ಮಂತ್ರಿಯ ಮೇಲ್ವಿಚಾರಣೆಯಲ್ಲಿ ದೇವಾಲಯದ ನಿರ್ಮಾಣ ಕಾರ್ಯ ಆರಂಭವಾಯಿತು. ಶಿಲ್ಪಿಗಳು ತಮ್ಮ ಕಲೆಯ ಕೌಶಲ್ಯವನ್ನು ಪ್ರದರ್ಶಿಸಲು ಸೆಣಸಾಡಿದರು.



4 ಕೆಲವು ತಿಂಗಳ ನಂತರ ಮಂತ್ರಿ ರಾಜನ ಆಸ್ಥಾನಕ್ಕೆ ಬಂದ.




5 ಒಂದು ದಿನ ರಾಜನು ಅರಮನೆಯ ಮೇಲ್ಛಾವಣಿಯಲ್ಲಿ ನಡೆದಾಡುತ್ತಿದ್ದ. ಆಗ ಕೆಳಗೆ ಉದ್ಯಾನದಲ್ಲಿ...




6




ಮರುದಿನ ದೇವಾಲಯದ ನಿರ್ಮಾಣ ಕಾರ್ಯ ನಡೆಯುತ್ತಿದ್ದಲ್ಲಿಗೆ ಮಹಾರಾಜ ಬಂದ.






**8** ರಾಜನ ಮಾತನ್ನು ಕೇಳಿ ಮಂತ್ರಿ ಚಿಂತಿತನಾದ. ಖರ್ಚು ವೆಚ್ಚದ ವಿವರವಾದ ಲೆಕ್ಕಾಚಾರವನ್ನು ಇಟ್ಟಿರಲಿಲ್ಲ. ದೇವರಿಗಾಗಿ ಮತ್ತು ತನ್ನ ಪ್ರೀತಿಯ ರಾಜನಿಗಾಗಿ ಪ್ರಾಮಾಣಿಕ ಕರ್ತವ್ಯ ನಿರ್ವಹಿಸುತ್ತಿದ್ದ ಮಂತ್ರಿಗೆ ಅವರ ಮೇಲೆ ಅಪಾರ ನಂಬಿಕೆ ಇತ್ತು. ರಾಜನು ಲೆಕ್ಕಾಚಾರ ಕೇಳುತ್ತಾನೆಂದು ಮಂತ್ರಿಯು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಮರುದಿನ ಮಂತ್ರಿ ದೇವಾಲಯ ನಿರ್ಮಾಣವಾಗುತ್ತಿದ್ದ ಸ್ಥಳದಲ್ಲಿ ವಿಘ್ನೇಶ್ವರನ ಪ್ರತಿಮೆಯ ಮುಂದೆ ನಿಂತು..




**10** ಮರುದಿನ ರಾಜನ ಆಸ್ಥಾನಕ್ಕೆ ಖರ್ಚುವೆಚ್ಚದ ಲೆಕ್ಕಾಚಾರಗಳೊಂದಿಗೆ ಒಬ್ಬ ಬ್ರಹ್ಮಚಾರಿ ಬಂದ.












ರಾಜನ ವಿವೇಚನೆಯನ್ನು ಕಂಡು ಎಲ್ಲರೂ ತಲೆದೂಗಿದರು.

14 ಲೆಕ್ಕಪರಿಶೋಧಕನು ಹೋಗಿ, ಸ್ವಲ್ಪ ಹೊತ್ತಿನ ಬಳಿಕ ಮಂತ್ರಿಯೊಂದಿಗೆ ಮತ್ತೆ ಬಂದ.




15 ನಡೆದ ಕಾರ್ಯಗಳನ್ನೆಲ್ಲ ರಾಜನು ತನ್ನ ಆಸ್ಥಾನದಲ್ಲಿ ವಿವರಿಸಿದ. ಮಂತ್ರಿ ಕೂಡ ತಾನು ವಿಘ್ನೇಶ್ವರನನ್ನು ಪ್ರಾರ್ಥಿಸಿದ ವಿಚಾರವನ್ನು ಸಭೆಗೆ ತಿಳಿಸಿದ.






# ವಿವಿಧ ಕೇಂದ್ರಗಳಲ್ಲಿ ಸ್ವಾಮಿ ಅಭೇದಾನಂದರ ಹಾಗೂ ಸೋದರಿ ನಿವೇದಿತಾಳ ೧೫೦ನೇ ಜನ್ಮ ಶತಮಾನೋತ್ಸವ

ಕಳೆದ ಕೆಲವು ತಿಂಗಳುಗಳಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ವಿವಿಧ ಶಾಖಾಕೇಂದ್ರಗಳಲ್ಲಿ ಸ್ವಾಮಿ ಅಭೇದಾನಂದರ ಹಾಗೂ ಸೋದರಿ ನಿವೇದಿತಾಳ ೧೫೦ನೇ ಜನ್ಮ ಶತಮಾನೋತ್ಸವವನ್ನು ವಿವಿಧ ಕಾರ್ಯಕ್ರಮಗಳೊಂದಿಗೆ ಆಚರಿಲಾಯಿತು. ಅವುಗಳ ಒಂದು ಸಂಕ್ಷಿಪ್ತ ನೋಟ ಇಲ್ಲಿದೆ:

**ಸ್ವಾಮಿ ಅಭೇದಾನಂದರ ೧೫೦ನೇ ಜನ್ಮ ಶತಮಾನೋತ್ಸವ:** **ಬಾರಾನಗರ ಮಠ**ವು ಏಪ್ರಿಲ್ ೨೩ರಂದು ಸಾರ್ವಜನಿಕ ಸಭೆಯೊಂದನ್ನು ಏರ್ಪಡಿಸಿತು. ಇದರಲ್ಲಿ ಸುಮಾರು ೧೦೦ ಮಂದಿ ಪಾಲ್ಗೊಂಡಿದ್ದರು. **ಲಕ್ನೋ ಆಶ್ರಮ**ವು ಏಪ್ರಿಲ್ ೨೩ರಂದು ಆಧ್ಯಾತ್ಮಿಕ ಶಿಬಿರವೊಂದನ್ನು ಏರ್ಪಡಿಸಿದ್ದು, ಇದರಲ್ಲಿ ಸುಮಾರು ೩೦೦ ಮಂದಿ ಭಕ್ತರು ಭಾಗಹಿಸಿದರು. ಈ ಕೇಂದ್ರವು ಯುವಕರಿಗಾಗಿ ನಡೆಸಿದ ವಿಶೇಷ ಕಾರ್ಯಕ್ರಮದಲ್ಲಿ ೧೨೦ ಮಂದಿ ಯುವಕರು ಭಾಗವಹಿಸಿದರು. **ವಡೋದರಾ** ಕೇಂದ್ರವು ಏಪ್ರಿಲ್ ೧೭ರಂದು ಆಧ್ಯಾತ್ಮಿಕ ಶಿಬಿರವೊಂದನ್ನು ನಡೆಸಿತು. ಇದರಲ್ಲಿ ಸುಮಾರು ೧೧೦ ಮಂದಿ ಭಾಗವಹಿಸಿದ್ದರು.

**ಸೋದರಿ ನಿವೇದಿತಾ ಅವರ ೧೫೦ ನೇ ಜನ್ಮ ಶತಮಾನೋತ್ಸವ :** **ಬಾರಾನಗರ ಮಠ**ವು ಜನವರಿ ೨೩ರಂದು ವಿದ್ಯಾರ್ಥಿಗಳಿಗಾಗಿ ಏಕಾಗ್ರತಾ ಶಿಬಿರವನ್ನು ಏರ್ಪಡಿಸಿತು. ಇದರಲ್ಲಿ ೧೦೦ ಮಂದಿ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು. **ಕೊಯಮತ್ತೂರು ಮಠ**ವು ಮಾರ್ಚ್ ೪ ರಂದು ಸೋದರಿ ನಿವೇದಿತಾ ಕುರಿತಂತೆ ಭಾಷಣ, ನಾಟಕಗಳನ್ನೊಳಗೊಂಡ ವಿಶೇಷ ಕಾರ್ಯಕ್ರಮವನ್ನು ಏರ್ಪಡಿಸಿತ್ತು . ಇದರಲ್ಲಿ ಸುಮಾರು ೪೦೦ ಮಂದಿ ಭಾಗವಹಿಸಿದ್ದರು. **ಕೊಂಟ್ಯಾ ಆಶ್ರಮ**ವು (ಪ.ಬಂಗಾಳ) ಏಪ್ರಿಲ್ ೮ರಂದು ನಡೆಸಿದ ಭಕ್ತ ಸಮಾವೇಶದಲ್ಲಿ ಸುಮಾರು ೧೭೦ ಮಂದಿ ಭಾಗವಹಿಸಿದರು. **ದಾರ್ಜಿಲಿಂಗ್** ಹಾಗೂ **ಜಲಪ್ಯಾಗುಡಿ ಆಶ್ರಮ**ಗಳು ಮಾರ್ಚ್ ೩೧ರಂದು **ಸಿಲಿಗುರಿ**ಯಲ್ಲಿ ಒಟ್ಟಾಗಿ ಏರ್ಪಡಿಸಿದ ವಿಶೇಷ ಕಾರ್ಯಕ್ರಮದಲ್ಲಿ ವರ್ಣರಂಜಿತ ಮೆರವಣಿಗೆ ಹಾಗೂ ಎರಡು ಸಾರ್ವಜನಿಕ ಸಭೆಗಳು ನಡೆದವು. ಸುಮಾರು ೨೧೦೦ ಮಂದಿ ಇದರಲ್ಲಿ ಭಾಗವಹಿಸಿದ್ದರು. **ಜಲಪ್ಯಾಗುಡಿ ಆಶ್ರಮ**ವು ಏಪ್ರಿಲ್ ೧ರಂದು ನಡೆಸಿದ ಇಡೀ ದಿನದ ಕಾರ್ಯಕ್ರಮದಲ್ಲಿ ಮೆರವಣಿಗೆ, ಯುವಸಮ್ಮೇಳನ, ಸಾರ್ವಜನಿಕ ಸಭೆಗಳು ನಡೆದವು. ಒಟ್ಟು ೩೭೦೦ ಮಂದಿ ಇದರಲ್ಲಿ ಭಾಗವಹಿಸಿದ್ದರು.

**ಲಿಂಬ್ಡಿ ಆಶ್ರಮ**ದಲ್ಲಿ ಏಪ್ರಿಲ್ ೧೮ರಂದು ಸಂಗೀತ ಕಾರ್ಯಕ್ರಮವೊಂದು ಜರುಗಿದ್ದು, ಇದರಲ್ಲಿ ೨೦೦ ಮಂದಿ ಭಾಗವಹಿಸಿದ್ದರು. **ಮೇಖಲಿಗಂಜ್ ಆಶ್ರಮ** ಕೂಡ ಮಾರ್ಚ್ ೩೧ ರಂದು ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸಿತು.

**ಪುರಿ ಮಿಷನ್** ಆಶ್ರಮವು ಎರಡು ಕೇಂದ್ರಗಳಲ್ಲಿ ಮಾರ್ಚ್ ೨೨ ಹಾಗೂ ೨೩ರಂದು ಸೋದರಿ ನಿವೇದಿತಾ ಬಗ್ಗೆ ರಸಪ್ರಶ್ನೆ ಸ್ಪರ್ಧಾ ಕಾರ್ಯಕ್ರಮಗಳನ್ನು ಏರ್ಪಡಿಸಿತ್ತು . ಇವುಗಳಲ್ಲಿ ಒಟ್ಟು ೬೧೫ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. **ರಾಜಾರ್‌ಹಾಟ್ ವಿಷ್ಣುಪುರ್** ಆಶ್ರಮವು ಮಾರ್ಚ್ ೨೪ರಂದು ಸಾಂಸ್ಕೃತಿಕ ಸ್ಪರ್ಧೆಗಳು ಹಾಗೂ ಯುವ ಸಮ್ಮೇಳನ ಕಾರ್ಯಕ್ರಮಗಳನ್ನು ನಡೆಸಿದ್ದು, ಇದರಲ್ಲಿ ಸುಮಾರು ೪೫೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.

**ಸ್ವಾಮಿ ವಿವೇಕಾನಂದರ ನಿವಾಸ** ದಲ್ಲಿ ಮಾರ್ಚ್ ೨೭ ರಂದು ಪ್ರವಚನ, ಮಾರ್ಚ್ ೨೯ ಹಾಗೂ ೩೧ರಂದು ಸಂಗೀತ ಕಾರ್ಯಕ್ರಮಗಳು, ಏಪ್ರಿಲ್ ೧೮ರಂದು ವಿದ್ಯಾರ್ಥಿಗಳಿಗಾಗಿ ವಿಚಾರ ಸಂಕಿರಣ ನಡೆಯಿತು. ಈ ಕಾರ್ಯಕ್ರಮಗಳಲ್ಲಿ ಸುಮಾರು ೧೩೫೦ ಮಂದಿ ಭಾಗವಹಿಸಿದ್ದರು. **ತಿರುಪತಿ ಆಶ್ರಮ**ವು ನಡೆಸಿದ ಪ್ರಬಂಧ ಸ್ಪರ್ಧೆಯಲ್ಲಿ ಸುಮಾರು ೫೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. **ವಡೋದರಾ ಆಶ್ರಮ**ವು ಏಪ್ರಿಲ್ ೧೮ರಂದು ನಿವೇದಿತಾ ಜೀವನ ಕುರಿತ ನಾಟಕ ಹಾಗೂ ಚಲನಚಿತ್ರವೊಂದನ್ನು ಪ್ರದರ್ಶಿಸಿತು. ಸುಮಾರು ೩೦೦ ಮಂದಿ ಪ್ರೇಕ್ಷಕರು ಇವನ್ನು ವೀಕ್ಷಿಸಿದರು. **ವಾರಾಣಸಿ ಅದ್ವೈತ ಆಶ್ರಮ**ವು ಏಪ್ರಿಲ್ ೨೩ರಂದು ಆಧ್ಯಾತ್ಮಿಕ ಶಿಬಿರವೊಂದನ್ನು ಏರ್ಪಡಿಸಿತ್ತು. ಇದರಲ್ಲಿ ಸುಮಾರು ೬೦ ಮಂದಿ ಭಕ್ತರು ಭಾಗವಹಿಸಿದ್ದರು.

Managing Editor : Swami Atmajnananda
Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್




## ಅಂತರಾಷ್ಟ್ರೀಯ ವಿಶೇಷ ಪ್ರವಾಸಗಳು

### 7 ದಿನಗಳ ರಷ್ಯಾ ಪ್ರವಾಸ

**ಮಾಸ್ಕೋ** : ಕ್ರೆಮ್‌ಲಿನ್ ಗ್ರೌಂಡ್, ರೆಡ್ ಸ್ಕ್ವೇರ್, ರಷ್ಯಾ ಸರ್ಕಸ್,
ಅಂಡರ್‌ಗ್ರೌಂಡ್ ಟೂರ್ ಆಫ್ ಮಾಸ್ಕೊ (ಮೆಟ್ರೊ), ಸಿಟಿ ಟೂರ್
**ಸೆಂಟ್ ಪೀಟರ್ಸ್‌ಬರ್ಗ್** : ಗ್ರ್ಯಾಂಡ್ ಪ್ಯಾಲೇಸ್, ಪೀಟರ್ ಓಫ್ ಗಾರ್ಡನ್,
ಹರ್ಮಿಟೇಜ್ ಮ್ಯೂಸಿಯಂ, ನೇವ ಬೋಟ್ ರೈಡ್, ಸೈಂಟ್ ಐಸಾಕ್ಸ್ ಕೆಥಡ್ರಲ್, ಸಿಟಿ ಟೂರ್

ರಷ್ಯಾ



ಜುಲೈ, ಆಗಸ್ಟ್

### 8 ದಿನಗಳ ಥೈಲ್ಯಾಂಡ್ – ಕಾಂಬೋಡಿಯ ಪ್ರವಾಸ

ಕಾಂಬೋಡಿಯ – ಸಿಯಾಮ್‌ರಿಪ್, ಅಂಕೊರ್‌ವಾಟ್,
ತೋಂಲ್ಲೇ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು,
ಥೈಲ್ಯಾಂಡ್ – ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ
ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

ಕಾಂಬೋಡಿಯಾ



ಸೆಪ್ಟೆಂಬರ್

### 7 ದಿನಗಳ ಸಿಂಗಾಪುರ–ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ,
ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್,
ಯುನಿವರ್ಸಲ್ ಸ್ಟುಡಿಯೋ
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ,
ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

ಸಿಂಗಾಪುರ್



ಜುಲೈ, ಆಗಸ್ಟ್
ಸೆಪ್ಟೆಂಬರ್

### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.–ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್
ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

ಲಂಡನ್



ಜೂನ್, ಜುಲೈ
ಆಗಸ್ಟ್

### 18 ದಿನಗಳ ಅಮೇರಿಕಾ ಹಾಗೂ ಬಹಮಾಸ್ ಕ್ರೂಸ್ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್,
ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್ಕೋ, ಆರ್‌ಲ್ಯಾಂಡೊ, ಬಹಮಾಸ್‌ಕ್ರೂಸ್

ಅಮೆರಿಕಾ



ಸೆಪ್ಟೆಂಬರ್
ಅಕ್ಟೋಬರ್

### 10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ

ಆಕ್ರೋಬೆಟಿಕ್ ಶೋ, ಓಷನ್ ಪಾರ್ಕ್, ಬೀಜಿಂಗ್ ನಗರ ವೀಕ್ಷಣೆ,
ಶಾಂಘೈ ನಗರ ವೀಕ್ಷಣೆ, ಏಳು ಅದ್ಭುತಗಳಲ್ಲಿ ಒಂದಾದ ಚೀನಾ
ಮಹಾಗೋಡೆ (Great Wall of China) ಸಮ್ಮರ್ ಪ್ಯಾಲೇಸ್,
ಹಾಂಕಾಂಗ್ ಮ್ಯೂಸಿಯಂ ಮತ್ತು ಮಕಾವ್ ಹಾಗೂ ಇತರೆ.

ಚೈನಾ



ಸೆಪ್ಟೆಂಬರ್
ಅಕ್ಟೋಬರ್

**ಪ್ರಧಾನ ಕಛೇರಿ : ಬಸವನಗುಡಿ**
ನಂ. 98, 1ನೇ ಮಹಡಿ, ಡಿವಿಜಿ ರಸ್ತೆ
ಬಸವನಗುಡಿ, ಬೆಂಗಳೂರು – 560004.
ಫೋನ್: 080-26670646, 26621983
ಮೊಬೈಲ್ : 9900080794, 9900080796

**ಶಾಖಾ ಕಛೇರಿ : ಮಲ್ಲೇಶ್ವರಂ**
ನಂ.198, 1ನೇ ಮಹಡಿ, 11ನೇ ಕ್ರಾಸ್, ಯತಿರಾಜಮಠ
ಬಿಲ್ಡಿಂಗ್, ಮಲ್ಲೇಶ್ವರಂ, ಬೆಂಗಳೂರು – 560003.
ಫೋನ್: 080-41204155, 23445559
ಮೊಬೈಲ್ : 9900080792

**www.orchidtours.net**

